# ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿನ ಕೈಗಾರಿಕಾಭಿವೃದ್ಧಿ ಒಂದು ಐತಿಹಾಸಿಕ ಅಧ್ಯಯನ

ಚರಿತ್ರೆ ಎಂ.ಫಿಲ್. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ
**'ಎಂ.ಫಿಲ್. ನಿಬಂಧ'**


ಸಂಶೋಧನ ವಿದ್ಯಾರ್ಥಿ :
**ಅರ್ಜುನ್ ಎಸ್.ಪಿ.**
ರಿ. ನಂ: **KRSMH00636**

ಮಾರ್ಗದರ್ಶಕರು :
**ಡಾ. ಹೆಚ್.ಎಸ್. ಬಸವೇಗೌಡ**
ಸಂಯೋಜಕರು
ಇತಿಹಾಸ ಸ್ನಾತಕೋತ್ತರ ಅಧ್ಯಯನ ಕೇಂದ್ರ,
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ.

ಅಧ್ಯಯನ ಕೇಂದ್ರ :
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ)
ಮಂಡ್ಯ

**ಇತಿಹಾಸ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ**
ಹಂಪಿ.


**2012–13**

# ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿನ ಕೈಗಾರಿಕಾಭಿವೃದ್ಧಿ ಒಂದು ಐತಿಹಾಸಿಕ ಅಧ್ಯಯನ

ಚರಿತ್ರೆ ಎಂ.ಫಿಲ್. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ
**'ಎಂ.ಫಿಲ್. ನಿಬಂಧ'**


ಸಂಶೋಧನ ವಿದ್ಯಾರ್ಥಿ :
**ಅರ್ಜುನ್ ಎಸ್.ಪಿ.**
ರಿ. ನಂ: **KRSMH00636**

ಮಾರ್ಗದರ್ಶಕರು :
**ಡಾ. ಹೆಚ್.ಎಸ್. ಬಸವೇಗೌಡ**
ಸಂಯೋಜಕರು
ಇತಿಹಾಸ ಸ್ನಾತಕೋತ್ತರ ಅಧ್ಯಯನ ಕೇಂದ್ರ,
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ.

ಅಧ್ಯಯನ ಕೇಂದ್ರ :
**ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**
ಕರ್ನಾಟಕ ಸಂಘ (ರಿ)
ಮಂಡ್ಯ.

**ಇತಿಹಾಸ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ**
ಹಂಪಿ.


**2012–13**

1070

# ಸಂಶೋಧನಾ ವಿದ್ಯಾರ್ಥಿಯ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ **ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2012-13ನೇ** ಸಾಲಿಗೆ ಇತಿಹಾಸ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿನ ಕೈಗಾರಿಕಾಭಿವೃದ್ಧಿ ಒಂದು ಐತಿಹಾಸಿಕ ಅಧ್ಯಯನ"** ವಿಷಯವನ್ನು ಆಯ್ಕೆ ಮಾಡಿಕೊಂಡು **ಡಾ. ಹೆಚ್.ಎಸ್. ಬಸವೇಗೌಡ** ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಅರ್ಜುನ್ ಎಸ್.ಪಿ.

(ಅರ್ಜುನ್ ಎಸ್.ಪಿ.)
ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ,
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ
(ಕನ್ನಡ ವಿ.ವಿ. ಹಂಪಿ – ಮಾನ್ಯತೆ ಪಡೆದಿದೆ)

ದಿನಾಂಕ: 3/8/2013
ಸ್ಥಳ : ಮಂಡ್ಯ

## ಮಾರ್ಗದರ್ಶಕರ ಪ್ರಮಾಣ ಪತ್ರ

**"ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿನ ಕೈಗಾರಿಕಾಭಿವೃದ್ಧಿ ಒಂದು ಐತಿಹಾಸಿಕ ಅಧ್ಯಯನ"** ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಶ್ರೀ. ಅರ್ಜುನ್ ಎಸ್.ಪಿ.** ರವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತಿದ್ದೇನೆ.

ಸ್ಥಳ : ಮಂಡ್ಯ
ದಿನಾಂಕ: 3/08/2013

H. S. B. G.
(ಡಾ. ಹೆಚ್.ಎಸ್. ಬಸವೇಗೌಡ)

*Dr. H. S. Basavegowda*
M.A., M.Ed., M.Phil., Ph.D.
Co-ordinator
Centre for Post Graduate Studies in History
Govt. College for Women
MANDYA-571 401.

# ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿನ ಕೈಗಾರಿಕಾಭಿವೃದ್ಧಿ ಒಂದು ಐತಿಹಾಸಿಕ ಅಧ್ಯಯನ

# ಪರಿವಿಡಿ

## ಛಾಯಾಚಿತ್ರಗಳ ಪಟ್ಟಿ

## ಅಧ್ಯಾಯ–1

# ಪೀಠಿಕೆ, ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

### 1.1 ಪೀಠಿಕೆ :

ಕರ್ನಾಟಕ ಚರಿತ್ರೆಯಲ್ಲಿ ಮೈಸೂರು ಸಂಸ್ಥಾನವು ವಿಶಿಷ್ಟವಾದ ಐತಿಹಾಸಿಕ ಮಹತ್ವವನ್ನು ಹೊಂದಿದೆ. ಹಲವಾರು ರಾಜಮನೆತನಗಳು, ರಾಜರುಗಳು, ಪಾಳೆಯಗಾರರು, ಆಡಳಿತಗಾರರು, ಆಳ್ವಿಕೆ ನಡೆಸಿದ್ದಾರೆ. ಉದಾ: ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು, ಹೈದರಲಿ ಮತ್ತು ಟಿಪ್ಪುಸ್ತುಲಾನ್ ಮುಂತಾದ ರಾಜಮನೆತನಗಳ ಆಳ್ವಿಕೆಯನ್ನು ನೋಡಬಹುದಾಗಿದೆ. ಕೆಲವು ರಾಜಮನೆತನಗಳು ದೀರ್ಘಕಾಲ ಮತ್ತು ಕೆಲವು ಮನೆತನಗಳು ಅತ್ಯಲ್ಪ ಕಾಲಾವಧಿಯಲ್ಲಿ ಆಡಳಿತವನ್ನು ನಡೆಸಿವೆ. ಇವರು ಇಲ್ಲಿನ ಸಂಸ್ಕೃತಿಗೆ ತಮ್ಮದೇ ಆದ ಕೋಡುಗೆಯನ್ನು ನೀಡಿದ್ದಾರೆ. ಅವರ ಆಡಳಿತ ಕ್ಷೇತ್ರದಲ್ಲಿ ವೈಜ್ಞಾನಿಕ ಪ್ರಗತಿಯನ್ನು ಕುರಿತು ಅಧ್ಯಯನ ಮಾಡಿದಾಗ ಪ್ರಮುಖವಾಗಿ ಕೈಗಾರಿಕಾಭಿವೃದ್ಧಿ ಮಹತ್ವವಾದ ಸ್ಥಾನವನ್ನು ಪಡೆದಿದೆ.

ಕರ್ನಾಟಕ ಚರಿತ್ರೆಯಲ್ಲಿ ಮೈಸೂರು ಸಂಸ್ಥಾನವು ಕೈಗಾರಿಕಾ ಅಭಿವೃದ್ಧಿಯಲ್ಲಿ ಪ್ರಗತಿಯನ್ನು ಹೊಂದಿತ್ತು. ಮೈಸೂರು ಸಂಸ್ಥಾನಕ್ಕೆ ಒಳಪಟ್ಟ ಪ್ರಮುಖ ಪ್ರದೇಶಗಳೆಂದರೆ, ಮೈಸೂರು, ಬೆಂಗಳೂರು, ತುಮಕೂರು, ಕೋಲಾರ, ಶಿವಮೊಗ್ಗ, ಮಂಡ್ಯ, ಚಿತ್ರದುರ್ಗ, ಶ್ರೀರಂಗಪಟ್ಟಣ, ಕಡೂರು, ಹಾಸನ, ಧಾರವಾಡ, ಬಿದನೂರು, ಕಡಪ, ವೆಲ್ಲೂರು, ಕೊಯಮತ್ತೂರು, ದಿಂಡಿಗಲ್ಲು, ಮಲಬಾರ್, ತಿರಿಚನಾಪಳ್ಳಿ, ತಂಜಾವೂರು, ಗುತ್ತಿ, ಗುರಂಕೊಂಡ, ಸಲಾಮಾಬಾದ್, ಸತಾರ, ಕೇರಳದ ಬೇಕಲ್ ಕೋಟೆ ಇನ್ನೂ ಮುಂತಾದ ಪ್ರದೇಶಗಳು.

ಮೈಸೂರು ಸಂಸ್ಥಾನವು ಕ್ರಿ.ಶ. 1399 ರಲ್ಲಿ ಯದುರಾಯನಿಂದ ಸ್ಥಾಪಿತವಾಯಿತು. ಮೈಸೂರು ಸಂಸ್ಥಾನವನ್ನು 25 ಒಡೆಯರುಗಳು ಆಳ್ವಿಕೆ ನಡೆಸಿದ್ದಾರೆ. ಅವರುಗಳಲ್ಲಿ ಪ್ರಮುಖ ಒಡೆಯರುಗಳೆಂದರೆ, ರಾಜಒಡೆಯರು, ಕಂಠೀರವ ನರಸರಾಜ ಒಡೆಯರು, ಚಿಕ್ಕದೇವರಾಜ ಒಡೆಯರು, ನಾಲ್ವಡಿ ಕೃಷ್ಣರಾಜ ಒಡೆಯರು ಮೊದಲಾದವರು.

18ನೇ ಶತಮಾನದ ಉತ್ತರಾರ್ಧದಲ್ಲಿ ಕರ್ನಾಟಕದ ಇತಿಹಾಸವು ತನ್ನ ಕೆಲವು ವಿಶಿಷ್ಟ ಲಕ್ಷಣಗಳಿಂದ ಕಾಣಿಸಿಕೊಳ್ಳುತ್ತದೆ. ಮೈಸೂರು ಸಂಸ್ಥಾನದಲ್ಲಿ ಭಿನ್ನಮಾದರಿಯ ರಾಜಕಾರಣವು ತಲೆದೋರುತ್ತದೆ. ಆ ಸಂದರ್ಭದಲ್ಲಿ ಅಂದರೆ ಹೈದರಾಲಿ ಮತ್ತು ಟಿಪ್ಪುಸ್ತುಲಾನ್ ಇವರ ಆಡಳಿತದ ಕಾಲಾವಧಿಯಲ್ಲಿ ಮೈಸೂರು ಸಂಸ್ಥಾನವು ಮತ್ತಷ್ಟು

ವಿಶಾಲವಾಗಿ ಬೆಳೆದಿತ್ತು. ಹೈದರಾಲಿ ಮತ್ತು ಟಿಪ್ಪುಸ್ತುಲಾನ್‌ರವರು ತಮ್ಮ ಕಾಲದಲ್ಲಿ ಶ್ರೀರಂಗಪಟ್ಟಣ, ಮೈಸೂರು, ಬೆಂಗಳೂರು, ಶಿವಮೊಗ್ಗ, ಚಿತ್ರದುರ್ಗ, ಧಾರವಾಡ, ಕೋಲಾರ, ತುಮಕೂರು, ಮಂಡ್ಯ, ಮಡಿಕೇರಿ, ಬಳ್ಳಾರಿ, ಕಡಪ, ವೆಲ್ಲೂರು, ಧರ್ಮಪುರಿ, ಕೊಯಮತ್ತೂರು, ಪಿರಿಯಾಪಟ್ಟಣ, ರಾಯದುರ್ಗ, ಗುತ್ತಿ, ಕರ್ನೂಲು, ಮಧುಗಿರಿ, ದೊಡ್ಡಬಳ್ಳಾಪುರ, ಹುತ್ತರಿದುರ್ಗ, ಸಾವನದುರ್ಗ, ದೇವನಹಳ್ಳಿ, ಚಿಕ್ಕಬಳ್ಳಾಪುರ, ಮಧುಗಿರಿ, ನಂದಿದುರ್ಗ, ವೆಳ್ಳಾಡಿ, ಪಾಲ್ಫಾಟ್, ದಿಂಡಿಗಲ್ಲು, ಕಲ್ಲಿಕೋಟೆ, ಕಣ್ಣನೂರು, ಮಳವಳ್ಳಿ, ಮದ್ದೂರು, ಹೊನ್ನಾವರ ಇನ್ನೂ ಮುಂತಾದ ಪ್ರದೇಶಗಳಲ್ಲಿ (ಹೈದರಾಲಿ ಕ್ರಿ.ಶ. 1760 ರಿಂದ ಕ್ರಿ.ಶ. 1782ರ ಡಿಸೆಂಬರ್ 16ರ ವರೆಗೆ ಮತ್ತು ಟಿಪ್ಪು ಸುಲ್ತಾನ್ ಕ್ರಿ.ಶ. 1761 ರಿಂದ 1799ರ ವರೆಗೆ ಮೇ 4ರ ವರೆಗೆ) ತಮ್ಮ ಆಳ್ವಿಕೆಯನ್ನು ನಡೆಸಿದರು.[1]

ತಮ್ಮ ಆಡಳಿತದ ಕಾಲಾವಧಿಯಲ್ಲಿ ಹಲವಾರು ಪ್ರದೇಶಗಳಲ್ಲಿ ಅಂದರೆ, ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರ, ಚನ್ನಪಟ್ಟಣ, ಚಿತ್ರದುರ್ಗ, ಶಿವಮೊಗ್ಗ, ಶ್ರೀರಂಗಪಟ್ಟಣ, ತುಮಕೂರು, ಮಳವಳ್ಳಿ ಇನ್ನೂ ಮುಂತಾದ ಪ್ರದೇಶಗಳಲ್ಲಿ ವಿವಿಧ ವಸ್ತುಗಳ ತಯಾರಿಕಾ ಕೈಗಾರಿಕೆಗಳನ್ನು ಸ್ಥಾಪಿಸಿದರು. ಅವುಗಳೆಂದರೆ, ರೇಷ್ಮೆಬಟ್ಟೆ, ಹತ್ತಿಬಟ್ಟೆ, ಉಣ್ಣೆಬಟ್ಟೆ, ಕಬ್ಬಿಣ, ಉಕ್ಕು, ಗಾಜು, ಬಳೆ, ಸೀಸೆ, ಯುದ್ಧೋಪಕರಣಗಳಾದ ಬಂದೂಕು, ತುಪಾಕಿ, ಕೋವಿ, ಮದ್ದು, ಫಿರಂಗಿ, ರಾಕೆಟ್ ತಯಾರಿಕೆ[2] ಹಾಗೆಯೇ ಸಂಗೀತವಾದ್ಯದ ತಂತಿ, ಮರದ ಆಟಿಕೆ ವಸ್ತುಗಳು, ಬಳೆ, ಎಣ್ಣೆ, ಬಿದಿರಿನ ವಸ್ತುಗಳು, ಮಡಿಕೆ, ಚರ್ಮ ಹದಮಾಡುವುದು, ಚಪ್ಪಲಿ, ಕಲ್ಲುಗಾರಿಕೆ, ಸಕ್ಕರೆ ಮತ್ತು ಕಲ್ಲುಸಕ್ಕರೆ, ಬೆಲ್ಲ, ಹಡಗು, ಮರದ ಗಾಡಿ ಮುಂತಾದವುಗಳನ್ನು ವಿವಿಧ ವರ್ಗಗಳಾದ ಕುಂಬಾರರು, ಗಾಣಿಗರು, ನೇಯ್ಗೆಗಾರರು, ಕಲ್ಲುಕುಟಿಗರು, ಮೇದಾರರು ಮುಂತಾದವರು ತಯಾರಿಸುತ್ತಿದ್ದರು.

ಹೈದರಾಲಿ ಕೈಗಾರಿಕಾಭಿವೃದ್ಧಿಯನ್ನು ಸಾಧಿಸಿದಲ್ಲದೆ, ನಾಣ್ಯವ್ಯವಸ್ಥೆಗೆ ಆಸಕ್ತಿಯನ್ನು ನೀಡಿದ್ದನು. ಹೈದರಾಲಿ ತನ್ನ ಆಡಳಿತದ ಅವಧಿಯಲ್ಲಿ ನಗರ, ಗುತ್ತಿಪಟ್ಟಣ, ಪಟ್ಟಣ, ಕ್ಯಾಲಿಕಟ್, ಬಳ್ಳಾರಿಗಳಲ್ಲಿ ನಾಣ್ಯ ಟಂಕಸಾಲೆಗಳನ್ನು ಪ್ರಾರಂಭಿಸಿ ಚಿನ್ನದ ಹಾಗೂ ತಾಮ್ರದ ನಾಣ್ಯಗಳನ್ನು ಟಂಕಿಸಿ ಚಿನ್ನದ ನಾಣ್ಯಗಳಾದ ಪಗೋಡ, ಅರ್ಧಪಗೋಡ, ಪಣಂ, ಎಂದು ಹೆಸರನ್ನು ಇಟ್ಟಿದ್ದನು. ತಾಮ್ರದ ನಾಣ್ಯಗಳಾದ ಪೈಸ, ಅರ್ಧಪೈಸ, ಕಾಲು ಪೈಸ, 1/8 ಪೈಸಗಳನ್ನು ಚಲಾವಣೆಗೆ ತಂದಿದ್ದನು.

ತಂದೆಯಂತೆಯೇ ಟಿಪ್ಪು ಕೂಡ ನಾಣ್ಯ ವ್ಯವಸ್ಥೆಯಲ್ಲಿ ಸಾಕಷ್ಟು ಸುಧಾರಣೆಗಳನ್ನು ತಂದಿದ್ದನು. ಟಿಪ್ಪು ಶ್ರೀರಂಗಪಟ್ಟಣ, ನಜರ್‌ಬಾದ್ (ಮೈಸೂರು), ಬಿದನೂರು, ಬೆಂಗಳೂರು, ಧಾರವಾಡ, ಚಿತ್ರದುರ್ಗ, ಗುತ್ತಿ, ಗಂಜಿಕೋಟೆ, ಗುರ್‍ರಂಕೊಂಡ, ತಮಿಳುನಾಡಿನ ದಿಂಡಿಗಲ್ಲು, ಸಲಾಮಾಬಾದ್, ಕೇರಳದ ಕಲ್ಲಿಕೋಟೆ, ಬೇಕಲ್ ಕೋಟೆ, ಶಿವಮೊಗ್ಗದ ಹೊಳೆಹೊನ್ನೂರಿನಲ್ಲಿ, ಚಿಕ್ಕಮಗಳೂರು ಜಿಲ್ಲೆಯ

ಸಖರಾಯಪಟ್ಟಣ, ಚಿತ್ರದುರ್ಗದ ಕಲ್ಲೂರು, ಅಬ್ಬೂರುಗಳಲ್ಲಿ ಟಂಕಸಾಲೆಗಳನ್ನು ಸ್ಥಾಪಿಸಿದನು.[3] ಟಿಪ್ಪು ಸಿದಿಕಿ, ಫಾರೋಕಿ, ಫನಮ್ ಎಂಬ ಚಿನ್ನದ ನಾಣ್ಯಗಳನ್ನು ಮತ್ತು ಹೈದರಿ, ಇಮಾಮಿ, ಆಬಿದಿ, ಬಾಕಿರೀ, ಕಾಜಿಮಿ, ಖಜ್ರಿ, ಜಫರಿ ಎಂಬ ಬೆಳ್ಳಿಯ ನಾಣ್ಯಗಳನ್ನು ಓಸ್ಮಾನಿ ಅಥವಾ ಮುಷ್ಪರಿ, ಜೋಹ್ರಾ, ಬ್ರಹ್ರಾಂ, ಅಖ್ತರ್, ಕುತ್ಸ್ ಎಂಬ ತಾಮ್ರದ ನಾಣ್ಯಗಳನ್ನು ಚಲಾವಣೆಗೆ ತಂದನು.[4]

ಹೈದರಾಲಿ ಮತ್ತು ಟಿಪ್ಪು ತಮ್ಮ ಆಡಳಿತದಲ್ಲಿ ಕಂದಾಯ ವ್ಯವಸ್ಥೆಗೆ ಭೂಮಿಯನ್ನು ಅದರ ಗುಣ ಮತ್ತು ಬೆಳೆಯ ಮೇಲೆ ವಿಂಗಡಿಸಿ ಅವುಗಳ ಕಂದಾಯವನ್ನು ನಿಗಧಿಪಡಿಸುತ್ತಿದ್ದನು. ವಿವಿಧ ಬಗೆಯ ಭೂಮಿಗೆ ವಿವಿಧ ದರದಲ್ಲಿ ಕಂದಾಯ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರು. ಕಂದಾಯವನ್ನು ಸಂಗ್ರಹಿಸಲು ತನ್ನ ಸರ್ಕಾರದಲ್ಲಿ ವಿವಿಧ ಅಧಿಕಾರಿಗಳಾದ ಅಮಲದಾರ, ಶಿರಸ್ತೆದಾರ, ಗುಮಾಸ್ಥರು, ತರಫ್‌ದಾರ, ಸರಾಫ, ಮುನ್ಷಿ, ಗೊಲ್ಲ ಅಷ್ಟೇ ಅಲ್ಲದೆ ಸಹಾಯಕ್ಕೆ 6 ಜನ ಸಹಾಯ ಸೇವಕರನ್ನು ನೇಮಕ ಮಾಡಿದ್ದನು.

ಹಾಗೆಯೇ ವಾಣಿಜ್ಯ ವ್ಯಾಪಾರದಲ್ಲಿ ಪ್ರಗತಿಯನ್ನು ಸ್ಥಾಪಿಸಿದ್ದರು. ಮೈಸೂರು ರಾಜ್ಯದಲ್ಲಿ ಅಗಾಧವಾದ ನೈಸರ್ಗಿಕ ಅನುಕೂಲಗಳಿಂದ ತೆಂಗು, ಅಡಿಕೆ, ಬತ್ತ, ರಾಗಿ, ಮೆಣಸು, ಗೋಡಂಬಿ, ಏಲಕ್ಕಿ, ಕಾಫೀ, ಎಣ್ಣೆಕಾಳುಗಳು, ಕಬ್ಬು, ವೀಳ್ಯೆದೆಲೆ, ಹಣ್ಣು, ತರಕಾರಿ, ಹುಣಸೆ, ನೆಲಗಡಲೆ, ಅರಿಶಿಣ, ಮಾವು, ಹತ್ತಿ, ಹಿಪ್ಪುನೇರಳೆ ಸೊಪ್ಪು, ಜೋಳ, ಬಾಳೆ, ಹಲಸು ಮುಂತಾದವುಗಳನ್ನು ಬೆಳೆಯುತ್ತಿದ್ದರು.[5] ಮೈಸೂರು ರಾಜ್ಯದ ಪ್ರಮುಖ ವ್ಯಾಪಾರಿ ವಸ್ತುಗಳೆಂದರೆ, ರೇಷ್ಮೆ, ಏಲಕ್ಕಿ, ಅಡಿಕೆ, ಖರ್ಜೂರ, ಶ್ರೀಗಂಧ, ಸಾಂಬ್ರಾಣಿ, ಸಕ್ಕರೆ, ಕಲ್ಲುಸಕ್ಕರೆ, ತೆಂಗಿನಕಾಯಿ, ಜಾಯಿಕಾಯಿ, ಲವಂಗ, ಕಬ್ಬಿಣ, ಬೆಲ್ಲ, ತಾಳೇ ಬೆಲ್ಲ, ತಾಮ್ರ, ಸೀಗೇಕಾಯಿ, ತುಪ್ಪ, ಅಕ್ಕಿ, ಗೋಧಿ, ಕಂಬಳಿಗಳು, ಮೆಣಸು, ಮರದ ಆಟಿಕೆ ವಸ್ತುಗಳು, ವೀಳ್ಯೆದೆಲೆ, ಸುಣ್ಣ, ಬಟ್ಟೆ ಮುಂತಾದವು.[6]

ಮೈಸೂರು ರಾಜ್ಯಕ್ಕೆ ಸೇರಿದ ಬೆಂಗಳೂರು, ಶ್ರೀರಂಗಪಟ್ಟಣ, ಮೈಸೂರು, ಮಂಗಳೂರು ಮೊದಲಾದ ಸ್ಥಳಗಳು ವ್ಯಾಪಾರಿ ಚಟುವಟಿಕಾ ಕೇಂದ್ರಗಳಾಗಿದ್ದವು. ಅಷ್ಟೇ ಅಲ್ಲದೆ ಮೈಸೂರು, ಚೈನಾ, ಬರ್ಮಾ, ಅರೇಬಿಯಾ, ಫ್ರಾನ್ಸ್, ಆಫ್ಘಾನಿಸ್ಥಾನ, ಮೊದಲಾದ ರಾಷ್ಟ್ರಗಳೊಂದಿಗೆ, ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಟಿಪ್ಪು ತನ್ನ ಆಡಳಿತವನ್ನು ವಾಣಿಜ್ಯ ವ್ಯಾಪಾರದ ಹಿತದೃಷ್ಟಿಯಿಂದ ಕಚ್, ಮದರಾಸು, ಪಾಂಡಿಚೇರಿ, ಪುಣೆ, ಕರ್ನೂಲೂ, ಪಗಾರಕೋಟೆ, ಉತ್ಮು, ಮಲಗ್ಮಿ ಮುಂತಾದ ಪ್ರದೇಶಗಳಲ್ಲಿ 17 ವ್ಯಾಪಾರ ಕೋಠಿಗಳನ್ನು ಸ್ಥಾಪಿಸಿಕೊಂಡು ತಮಿಳುನಾಡು, ಕೇರಳ, ಮಹಾರಾಷ್ಟ್ರ, ಪಶ್ಚಿಮ ಬಂಗಾಳ, ಗುಜರಾತ್‌ಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಬೆಳೆಸಿಕೊಂಡಿದ್ದನು. ಮೈಸೂರು ರಾಜ್ಯದಲ್ಲಿ ಗುಜ್ಜರು, ಆದಿ ಬಣಜಿಗರು, ಲಂಬಾಣಿಗಳು, ಮಾರವಾಡಿಗಳು, ನಾರ್ವೇಕಾರರು, ಕೋಮಟಿಗರು, ಭಾಟಿಯರು, ಕನ್ನಡ ವೈಶ್ಯರು, ಮಲ್ಲವರು, ಲೋಹಾಣರು, ಶೆಟ್ಟಿಯರು, ಚಟ್ಟೇರರು, ಇನ್ನೂ

ಮುಂತಾದ ವರ್ತಕರ ವರ್ಗಗಳು ಅಂದಿನ ಕಾಲದಲ್ಲಿ ವ್ಯಾಪಾರವನ್ನು ತಮ್ಮ ವೃತ್ತಿಯನ್ನಾಗಿ ಹೊಂದಿದ್ದರು. ಒಟ್ಟಾರೆಯಾಗಿ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲಾವಧಿಯಲ್ಲಿ ಮೈಸೂರು ಸಂಸ್ಥಾನವು ಕೈಗಾರಿಕೆ ಮತ್ತು ಆರ್ಥಿಕವಾಗಿ ಸಾಕಷ್ಟು ಅಭಿವೃದ್ಧಿಯನ್ನು ಹೊಂದಿತ್ತೆಂದು ಹೇಳಬಹುದು.

**1.2 ಉದ್ದೇಶ ಮತ್ತು ವ್ಯಾಪ್ತಿ :**

ಕ್ರಿ.ಶ. 1399ರಲ್ಲಿ ಮೈಸೂರು ಸಂಸ್ಥಾನ ಸ್ಥಾಪನೆಗೊಂಡಿತು. ಮೈಸೂರು ಸಂಸ್ಥಾನವು ಕ್ರಿ.ಶ. 1399 ರಿಂದ ಕ್ರಿ.ಶ. 1831ರ ವರೆಗೆ ಹಾಗೂ 1881 ರಿಂದ 1947 ವಿವಿಧ ರಾಜರುಗಳು ಆಳ್ವಿಕೆಯನ್ನು ನಡೆಸಿದರು. ಆ ರಾಜರುಗಳಲ್ಲಿ ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಕೂಡ ಸೇರ್ಪಡೆಗೊಳ್ಳುತ್ತಾರೆ. ಇವರು ಕ್ರಿ.ಶ. 1760 ರಿಂದ 1799ರ ವರೆಗೆ ಆಳ್ವಿಕೆ ಮಾಡಿದರು. ಈ ಅವಧಿಯಲ್ಲಿ ಮೈಸೂರು ಸಂಸ್ಥಾನವು ಬೆಂಗಳೂರು, ಮೈಸೂರು, ಮಂಡ್ಯ, ಕೋಲಾರ, ಹಾಸನ, ಚಿಕ್ಕಮಗಳೂರು, ಚಿತ್ರದುರ್ಗ, ಶಿವಮೊಗ್ಗ, ತುಮಕೂರು, ಮಂಗಳೂರು ಮೊದಲಾದ ಪ್ರದೇಶಗಳಿಗೆ ವಿಸ್ತರಿಸಿತ್ತು. ಪ್ರಸ್ತುತ ಅಧ್ಯಯನದಲ್ಲಿ ಮೈಸೂರು ಸಂಸ್ಥಾನದ ಕೈಗಾರಿಕಾ ಮತ್ತು ಆರ್ಥಿಕಾಭಿವೃದ್ಧಿಯನ್ನು ವಿವೇಚಿಸಲಾಗಿದೆ. ಹೈದರಾಲಿ ಮತ್ತು ಟಿಪ್ಪು ವಿವಿಧ ಪ್ರದೇಶಗಳಲ್ಲಿನ ಪ್ರಧಾನ ಕೈಗಾರಿಕೆಗಳು, ಕೃಷಿ ಅವಲಂಬಿತ ಕೈಗಾರಿಕೆಗಳು ಅವುಗಳ ಉತ್ಪನ್ನ ಮತ್ತು ವಾಣಿಜ್ಯ ವ್ಯಾಪಾರವನ್ನು ಕುರಿತು ವಿವರಿಸಲಾಗಿದೆ. ವಿವಿಧ ಕೈಗಾರಿಕೆಗಳನ್ನು ಮತ್ತು ಆರ್ಥಿಕ ಚಟುವಟಿಕೆಗಳನ್ನು ನಡೆಸುತ್ತಿದ್ದ ಸಮುದಾಯಗಳನ್ನು ಕುರಿತು ಚರ್ಚಿಸಲಾಗಿದೆ.

ಪ್ರಸ್ತುತ ಅಧ್ಯಯನವು ಹೈದರಾಲಿ ಮತ್ತು ಟಿಪ್ಪು ಕಾಲದ ನಾಣ್ಯವ್ಯವಸ್ಥೆ ಹಾಗೂ ಆರ್ಥಿಕ ಜೀವನ ಹೇಗಿತ್ತು ಎಂಬುದನ್ನು ಒಳಗೊಂಡಿದೆ. ಹೈದರ್ ಮತ್ತು ಟಿಪ್ಪುವಿನ ನಾಣ್ಯಗಳ ಟಂಕಸಾಲೆಗಳು, ವಿವಿಧ ಲೋಹಗಳನ್ನು ನಾಣ್ಯಗಳ ತಯಾರಿಕೆಗೆ ಹೇಗೆ ಅಳವಡಿಸಿಕೊಂಡಿದ್ದರು ಹಾಗೂ ಆ ಕಾಲದಲ್ಲಿನ ನಾಣ್ಯಗಳಲ್ಲಿ ಹಂತ ಹಂತವಾಗಿ ಹೇಗೆ ನಾಣ್ಯಗಳ ಲಕ್ಷಣಗಳು ಬದಲಾದವು ಎಂಬುದನ್ನು ತಿಳಿಸಲಾಗಿದೆ. ಪ್ರಸ್ತುತ ಅಧ್ಯಯನವು ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಆಳ್ವಿಕೆ ಮಾಡುತ್ತಿದ್ದ ಮೈಸೂರು ಸಂಸ್ಥಾನದ ಪ್ರಮುಖ ಪ್ರದೇಶಗಳಾದ ಮೈಸೂರು, ಬೆಂಗಳೂರು, ಮಂಡ್ಯ, ಕೋಲಾರ, ತುಮಕೂರು, ಶಿವಮೊಗ್ಗ, ಚಿತ್ರದುರ್ಗ, ಚಿಕ್ಕಮಗಳೂರು, ಹಾಸನ ಈ ಪ್ರದೇಶಗಳಿಗೆ ಈ ಅಧ್ಯಯನ ಸೀಮಿತವಾಗಿದೆ. ಆದರೆ ಇವರ ಕಾಲದಲ್ಲಿ ಕೈಗಾರಿಕೆಗಳು ಯುದ್ಧದಲ್ಲಿ ಗೆದ್ದ ಪ್ರದೇಶಗಳಲ್ಲಿಯೂ ಕಾರ್ಖಾನೆಗಳು ವಿವಿಧ ತಯಾರಿಕಾ ವಸ್ತುಗಳು ಚದುರಿ ಹೋಗಿವೆ. ಹಾಗಾಗಿ ಕಲ್ಲಿಕೋಟೆ, ತಮಿಳುನಾಡಿನ ದಿಂಡಿಗಲ್, ಸಲಾಮಾಬಾದ್, ಧಾರವಾಡ, ಆಂಧ್ರಪ್ರದೇಶಗಳನ್ನು ಸಹ ಅಧ್ಯಯನ ವ್ಯಾಪ್ತಿಗೆ ಅಳವಡಿಸಿಕೊಳ್ಳಲಾಗಿದೆ. ಆದರೆ ಪ್ರಮುಖವಾಗಿ ಮೈಸೂರು ಸಂಸ್ಥಾನದಲ್ಲಿದ್ದ ಪ್ರದೇಶಗಳಿಗೆ ಮಾತ್ರ ಅಧ್ಯಯನ ಸೀಮಿತವಾಗಿದೆ. ಇವರ ಕಾಲದಲ್ಲಿದ್ದ ಹಾಗೂ ಇವರ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶಗಳ ಕೈಗಾರಿಕಾ ಬೆಳವಣಿಗೆಯನ್ನು ಪರಿಗಣಿಸಲಾಗಿದೆ.

ಕೃಷಿ ಅವಲಂಬಿತ ಕೈಗಾರಿಕೆಗಳನ್ನು ಹಾಗೂ ಖನಿಜ ಸಂಪನ್ಮೂಲ ಮೇಲೆ ಅವಲಂಬಿತವಾಗಿರುವ ಕೈಗಾರಿಕೆಗಳು ಪ್ರಾಣಿ ಹಾಗೂ ನೈಸರ್ಗಿಕ ಸಂಪನ್ಮೂಲಗಳ ಅವಲಂಬಿತ ಕೈಗಾರಿಕೆಗಳನ್ನು ಮಾತ್ರ ಈ ಅಧ್ಯಯನದ ವ್ಯಾಪ್ತಿಗೆ ಪರಿಗಣಿಸಲಾಗಿದೆ. ಕೈಗಾರಿಕೆಗಳು ನಾಣ್ಯಗಳ ವ್ಯವಸ್ಥೆ, ಆರ್ಥಿಕ ಜೀವನ ಈ ಅಂಶಗಳಿಗೆ ಮಾತ್ರ ಅಧ್ಯಯನ ಸೀಮಿತವಾಗಿದೆ. ಆರ್ಥಿಕ ಅಭಿವೃದ್ಧಿಗೆ ಅದರ ಕಂದಾಯ ವ್ಯವಸ್ಥೆ ಹಾಗೂ ವ್ಯಾಪಾರ–ವಾಣಿಜ್ಯಗಳು ಹೇಗೆ ಸಹಕಾರಿಯಾಗಿದ್ದವು ಎಂಬುದನ್ನೂ ವಿಶ್ಲೇಷಿಸಲಾಗಿದೆ.

**1.3 ಅಧ್ಯಯನದ ಮಹತ್ವ :**

ಕರ್ನಾಟಕ ಇತಿಹಾಸದಲ್ಲಿ ಮೈಸೂರು ಸಂಸ್ಥಾನದಲ್ಲಿ ಆಳ್ವಿಕೆ ನಡೆಸಿದ ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಕೈಗಾರಿಕಾಭಿವೃದ್ಧಿಯಲ್ಲಿ ಪ್ರಗತಿಯನ್ನು ಸಾಧಿಸಿದ್ದರು. ಅವರ ಹಿಂದಿನ ರಾಜರುಗಳಾದ ಮೈಸೂರು ಒಡೆಯರು ಕೃಷಿ ಆಧಾರಿತ ಕೈಗಾರಿಕಾ ವಸ್ತುಗಳಾದ ಹತ್ತಿಬಟ್ಟೆ, ಉಣ್ಣೆ, ರೇಷ್ಮೆ ಬಟ್ಟೆಗಳಿಗೆ ಆದ್ಯತೆ ನೀಡಿದರು. ಆದರೆ ಹೈದರ್ ಮತ್ತು ಟಿಪ್ಪು ಕಾಲದಲ್ಲಿ ತಮ್ಮ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಕಬ್ಬಿಣ ಮತ್ತು ಉಕ್ಕು ತಯಾರಿಕೆ, ಬಟ್ಟೆ, ಸಕ್ಕರೆ, ಕಲ್ಲುಸಕ್ಕರೆ, ಬೆಲ್ಲ, ಗಾಜು, ಬಳೆ, ಬಿದಿರಿನ ವಸ್ತುಗಳು, ಮರದ ವಸ್ತುಗಳು, ಗಾಡಿಗಳು, ಆಟಿಕೆ ಸಾಮಾನುಗಳು, ಬಂದೂಕು, ಕೋವಿ, ಫಿರಂಗಿ, ತುಪಾಕಿ, ಯುದ್ಧದ ಮದ್ದು, ರಾಕೆಟ್, ಯುದ್ಧದ ಇತರ ಸಲಕರಣೆಗಳು, ಮಡಿಕೆಗಳು ವಿವಿಧ ಲೋಹಗಳ ವಸ್ತುಗಳು, ಚರ್ಮದ ವಸ್ತು, ವೀಣೆಯ ತಂತಿ, ರೇಷ್ಮೆನೂಲು ಮುಂತಾದವುಗಳನ್ನು ಅಂದಿನ ವೈಜ್ಞಾನಿಕ ಜ್ಞಾನವನ್ನು ಅನುಸರಿಸುವುದರ ಮೂಲಕ ಕೈಗಾರಿಕಾಭಿವೃದ್ಧಿಕರಣ ಮೂಲಕ ಮೈಸೂರು ಸಂಸ್ಥಾನವನ್ನು ಆರ್ಥಿಕವಾಗಿ ಅಭಿವೃದ್ಧಿಗೊಳಿಸಿದರು. ಅಷ್ಟೇ ಅಲ್ಲದೆ ಕೈಗಾರಿಕಾ ತಯಾರಿಕಾ ವಸ್ತುಗಳಿಂದ ವಿದೇಶಿ ರಾಷ್ಟ್ರಗಳೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದರಲ್ಲದೆ, ಆಮದು ರಫ್ತುವಿಗೆ ಉತ್ತೇಜನ ನೀಡಿದ್ದರು. ಟಿಪ್ಪು ಕೈಗಾರಿಕೆಯ ಅಭಿವೃದ್ಧಿಗೋಸ್ಕರ ಬಂಗಾಳಕ್ಕೆ ತಮ್ಮ ರಾಜ್ಯದ ಜನರನ್ನು ತರಬೇತಿಗೆ ಕಳುಹಿಸಿದ್ದು ಮುಂತಾದ ಅಂಶಗಳನ್ನು ನೋಡಿದಾಗ ಪ್ರಸ್ತುತ ಸನ್ನಿವೇಶದಲ್ಲಿ ಇದರ ಅಧ್ಯಯನವು ಮಹತ್ವವೆನಿಸಿದೆ. ಹಾಗೆಯೇ ಟಿಪ್ಪು ಕಾಲದಲ್ಲಿದ್ದ ವಿವಿಧ ವಸ್ತುಗಳ ಉತ್ಪನ್ನಕ್ಕೆ ಬಳಸುತ್ತಿದ್ದ ಉಪಕರಣಗಳು ಅವನತಿಯ ಹಾದಿಗೆ ಬಂದಿರುವುದರಿಂದ ಮತ್ತೆ ಅವುಗಳ ಮೇಲೆ ಬೆಳಕು ಚೆಲ್ಲುವುದು ಮಹತ್ವವೆನಿಸಿದೆ.

**1.4 ಅಧ್ಯಯನದ ವಿಧಾನ :**

ಪ್ರಸ್ತುತ ಅಧ್ಯಯನವು ಚಾರಿತ್ರಿಕ ವಿಧಾನವಾಗಿದ್ದು, ಅಧ್ಯಯನಕ್ಕೆ ಪ್ರಾಥಮಿಕ ಆಧಾರಗಳು, ಅನುಷಂಗಿಕ ಆಧಾರಗಳು, ಸಮಕಾಲೀನ ದಾಖಲೆಗಳು, ನಿಯತಕಾಲಿಕೆಗಳನ್ನು ಬಳಸಿಕೊಳ್ಳಲಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯ, ಬೆಂಗಳೂರಿನ ಮಿಥಿಕ್ ಸೊಸೈಟಿ, ಮೈಸೂರಿನ ಓರಿಯಂಟಲ್ ಲೈಬ್ರರಿ,

ಮೈಸೂರು ಅರಮನೆಯ ಪತ್ರಾಗಾರ ಹಾಗೂ ಇನ್ನಿತರ ಗ್ರಂಥಾಲಯಗಳು, ಕ್ಷೇತ್ರಕಾರ್ಯ, ಸಂದರ್ಶನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಇದರ ಜೊತೆಗೆ ಸಮಾಜ ವಿಜ್ಞಾನದ ಇತರ ಶಾಸ್ತ್ರಗಳಾದ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದವುಗಳನ್ನು ಸಹಾಯಕವಾಗಿ ತೆಗೆದುಕೊಳ್ಳಲಾಗಿದೆ. ಅಧ್ಯಯನವು ಕ್ಷೇತ್ರಕಾರ್ಯಗಳನ್ನು ಒಳಗೊಂಡಿದ್ದು ಮಾಹಿತಿ ಸಂಗ್ರಹಣೆ, ವಿಶ್ಲೇಷಣೆ ಮತ್ತು ಸಂಯೋಜನೆಗಳನ್ನು ಒಳಗೊಂಡಿರುತ್ತದೆ. ಹೈದರಾಲಿ ಮತ್ತು ಟಿಪ್ಪು ಕಾಲದ ಕೈಗಾರಿಕೆಗಳು, ನಾಣ್ಯ ವ್ಯವಸ್ಥೆ, ಆರ್ಥಿಕ ಜೀವನ ಎಂಬ ಪರಿಕಲ್ಪನೆಗಳ ಮೂಲಕ ಅವರ ಇತಿಹಾಸದ ಮೇಲೆ ಹೊಸ ಮಾಹಿತಿಯನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು**

---

[1] ಸೂರ್ಯನಾಥ್ ಯು. ಕಾಮತ್ (ಮು.ಸಂ.), 'ಕರ್ನಾಟಕ ಗ್ಯಾಸೆಟಿಯರ್', ಸಂ.1, 1984, ಪು.258.

[2] ಷೇಕ್ ಆಲಿ, ಬಿ., 'ಕರ್ನಾಟಕ ಚರಿತ್ರೆ', ಸಂ.5, 1997, ಪು.479.

[3] ನರಸಿಂಹಮೂರ್ತಿ, ಎ.ವಿ., 'ಕರ್ನಾಟಕ ನಾಣ್ಯ ಪರಂಪರೆ', 2003, ಪು.278.

[4] ಗೋಪಾಲ್, ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.132–134.

[5] ಪಾಲಾಕ್ಷ, 'ಸಮಗ್ರ ಕರ್ನಾಟಕ ಇತಿಹಾಸ', 1979, ಪು.51.

[6] ಶೇಷಗಿರಿರಾವ್, ಹೆಚ್.ಎಲ್., 'ಬೆಂಗಳೂರು ದರ್ಶನ', ಸಂ.1, 1997, ಪು.32–33.

## ಅಧ್ಯಾಯ-2

# ಕೈಗಾರಿಕಾ ಬೆಳವಣಿಗೆ

## (ಪ್ರಧಾನ ಕೈಗಾರಿಕೆಗಳು)

### 2.1 ಚಾರಿತ್ರಿಕ ಹಿನ್ನೆಲೆ :

ಕರ್ನಾಟಕದ ಇತಿಹಾಸದಲ್ಲಿ ಮೈಸೂರು ಸಂಸ್ಥಾನವು ಕ್ರಿ.ಶ.1399 ರಲ್ಲಿ ಯದುರಾಯರೊಂದಿಗೆ ಸ್ಥಾಪನೆಗೊಂಡು ಬೆಟ್ಟದ 1ನೇ ಚಾಮರಾಜ, 1ನೇ ತಿಮ್ಮರಾಜ, 2ನೇ ಚಾಮರಾಜ, 3ನೇ ಬೆಟ್ಟದ ಚಾಮರಾಜ ಹೀಗೆ ಮೈಸೂರು ಸಂಸ್ಥಾನವು 25 ರಾಜರುಗಳು ಆಳ್ವಿಕೆಯನ್ನು ನಡೆಸಿದರು. ಇವರ ಆಡಳಿತಾವಧಿಯಲ್ಲಿ ಕೈಗಾರಿಕೆ ಬೆಳವಣಿಗೆಯು ಬಟ್ಟೆ ಹಾಗೂ ಯುದ್ಧೋಪಕರಣಗಳಿಗೆ ಮೀಸಲಾಗಿತ್ತು. ಆದರೆ, ಕ್ರಿ.ಶ. 1760ರಲ್ಲಿ ಅಧಿಕಾರಕ್ಕೆ ಬಂದ ಹೈದರಲಿ ತನ್ನ ರಾಜ್ಯದ ಪ್ರದೇಶದಲ್ಲಿ ಕೈಗಾರಿಕೆಯನ್ನು ಅಭಿವೃದ್ಧಿಗೊಳಿಸಿದನು. ಟಿಪ್ಪು ಕೂಡ ತನ್ನ ತಂದೆಯ ಮರಣದ ನಂತರ ಕೈಗಾರಿಕೆಯನ್ನು ಅಭಿವೃದ್ಧಿಗೊಳಿಸಿದನು. ಇವರ ಕೈಗಾರಿಕೆಯ ಅಭಿವೃದ್ಧಿಯನ್ನು ತಿಳಿದುಕೊಳ್ಳಲು ನಮಗಿರುವ ಮುಖ್ಯ ಆಕರಗಳೆಂದರೆ ಅವರ ಕಾಲದ ಇಂಗ್ಲೀಷ್ ಬರಹಗಾರರ ದಾಖಲೆಗಳು, ಪ್ರಾಚೀನ ಸ್ಮಾರಕಗಳು ಹಾಗೂ ಮತ್ತಿತರ ಪ್ರಾಥಮಿಕ ಆಕರಗಳು. ಮೈಸೂರು ಸಂಸ್ಥಾನಕ್ಕಿಂತ ಮುಂಚೆ ಕೈಗಾರಿಕಾ ತಯಾರಿಕಾ ವಸ್ತುಗಳ ಉತ್ಪಾದನೆ ಬೆಳಕಿಗೆ ಬಂದಿದೆ. ಕ್ರಿ.ಪೂ. 2000ದಲ್ಲೆ ಬಟ್ಟೆಗಳಿಗೆ ಬಣ್ಣ ಹಾಕಿ ಒಣಗಿಸುವ ಅತ್ಯಾಧುನಿಕ ಉತ್ತಮ ಜ್ಞಾನವನ್ನು ಮೆಹಂಜೊದಾರೋ ಪ್ರದೇಶದ ಜನರು ಬಳಸಿರುವುದನ್ನು ಭಾರತದಲ್ಲಿ ದೊರೆತಿರುವ ಪ್ರಾಕ್ತಾನಾಧಾರಗಳು ನಮಗೆ ಸಾಕ್ಷಿಯಾಗಿ ದೊರೆತಿವೆ. ಅಷ್ಟೇ ಅಲ್ಲದೆ ವ್ಯಾಪಾರಕ್ಕೆ ಸಂಬಂಧಿಸಿದ ಹಾಗೆ ಮಾರ್ಕೊಪೋಲೋನ ಬರವಣಿಗೆಯಲ್ಲಿ ಈ ರೀತಿ ಇದೆ ಚೀನಾ ಮತ್ತು ದಕ್ಷಿಣ-ಪೂರ್ವ ಏಷ್ಯಾ ರಾಷ್ಟ್ರಗಳಿಗೆ ಭಾರತದಿಂದ ಆಂಧ್ರ ಮತ್ತು ತಮಿಳುನಾಡಿನ ಬಂದರುಗಳ ಮೂಲಕ ಆ ದೇಶಗಳಿಗೆ ಹತ್ತಿಬಟ್ಟೆಗಳು ರವಾನೆ ಆಗುತ್ತಿದ್ದವು ಎಂದು ತಿಳಿದುಬಂದಿದೆ. ಹಾಗೆಯೇ ಬೌದ್ಧ ಸಾಹಿತ್ಯಗಳಲ್ಲಿಯೂ ಸಹ ಭಾರತೀಯರಿಗೆ ಉಣ್ಣೆ ಸರಕುಗಳನ್ನು ಉತ್ಪಾದಿಸುವ ಜ್ಞಾನ ಕ್ರಿ.ಪೂ. 500ಕ್ಕೂ ಮುಂಚೆನೇ ತಿಳಿದಿತ್ತು ಎಂಬ ಅಂಶವಿದೆ. ಢಾಕಾ ಮಸ್ಲಿನ್ ಬಟ್ಟೆಯು ಭಾರತದಲ್ಲಿ ತಯಾರಾಗುತ್ತಿದ್ದ ಉತ್ಪಾದನೆಗಿಂತ ಬೆಲೆಬಾಳುವ ಮತ್ತು ಗುಣಮಟ್ಟದಿಂದ ಕೂಡಿತ್ತು. ಗುಜರಾತಿನ ಅಹಮದಾಬಾದ್, ಆಂಧ್ರಪ್ರದೇಶದ ಮಚಲಿಪಟ್ಟಣ, ತಮಿಳುನಾಡಿನ ಆರ್ಕಾಟ್, ಉತ್ತರ ಪ್ರದೇಶದ ವಾರಣಾಸಿ ಮುಂತಾದ ಪ್ರದೇಶಗಳು ಕೈಗಾರಿಕಾ ಕ್ಷೇತ್ರದಲ್ಲಿ ತೊಡಗಿದ್ದವು. ಅದರಂತೆಯೇ ಮೈಸೂರಿನ ಪ್ರಾರಂಭಿಕ ಒಡೆಯರು ಕೈಗಾರಿಕಾ ಉತ್ಪನ್ನ ವಸ್ತುಗಳ ತಯಾರಿಕೆಗೆ ಗಮನ ಹರಿಸಿದರು. ಮೈಸೂರಿನ ಪ್ರಾರಂಭದ ಒಡೆಯರು ಹೆಚ್ಚು ಕೃಷಿಯಾಧಾರಿತ ಕೈಗಾರಿಕೆಗೆ ಗಮನವನ್ನು

ನೀಡಿದರು. ಹತ್ತಿಬಟ್ಟೆ, ರೇಷ್ಮೆಬಟ್ಟೆ, ಉಣ್ಣೆ, ಕೈಗಾರಿಕೆ, ಸಕ್ಕರೆ, ತಂಬಾಕು ತಯಾರಿಕೆಗಳಿಗೆ ಗಮನ ನೀಡಿದ್ದು ಬಟ್ಟೆ ಕಾರ್ಖಾನೆಗಳು ಪ್ರಮುಖ ಸ್ಥಾನದಲ್ಲಿ ಕಂಡುಬಂದಿವೆ. ಮೈಸೂರಿನ ಸಂಸ್ಥಾನದಲ್ಲಿ ಕ್ರಿ.ಶ. 1763ಕ್ಕಿಂತ ಹಿಂದೆ ಮೈಸೂರು ಚಿತ್ರದುರ್ಗ ಬೆಂಗಳೂರು ಪ್ರದೇಶಗಳಲ್ಲಿ ಮೈಸೂರು ಅರಸರು ಬಟ್ಟೆ ಉತ್ಪಾದನಾ ಕಾರ್ಖಾನೆಗಳನ್ನು ಸ್ಥಾಪಿಸಿದ್ದರು. ರೇಷ್ಮೆ, ಹತ್ತಿ ಹಾಗೂ ಉಣ್ಣೆಯಿಂದ ಬಟ್ಟೆ ತಯಾರಾಗುತ್ತಿತ್ತು.

ಚಿಕ್ಕದೇವರಾಜ ಒಡೆಯರು (ಕ್ರಿ.ಶ. 1673–1704) ಮೊಗಲ್ ಸಾಮ್ರಾಜ್ಯದ ಮಾದರಿಯಲ್ಲಿ 18 ಸುಪ್ರಸಿದ್ಧ ಆಡಳಿತ ಇಲಾಖೆ (ಅಠಾರ ಕಛೇರಿ) ಸ್ಥಾಪಿಸಿದ್ದರು. ಸೀಮೆಯ ಕಂದಾಚಾರದ ಚಾವಡಿ, ಸುಂಕದ ಚಾವಡಿ, ಕಬ್ಬಿಣದ ಚಾವಡಿ ಹೀಗೆ ವಿವಿಧ ಇಲಾಖೆಗಳನ್ನು ಸ್ಥಾಪಿಸಿದ್ದರು. ಕಬ್ಬಿಣದ ಚಾವಡಿ, ಕಬ್ಬಿಣದ ಗಣಿಗಳು, ಕಚ್ಚಾ ಕಬ್ಬಿಣವನ್ನು ಕೊಳ್ಳುವಿಕೆ, ಕಬ್ಬಿಣ ಉಪಕರಣಗಳ ತಯಾರಿಕೆ ಮತ್ತು ಮಾರಾಟಕ್ಕೆ ಸಂಬಂಧಿಸಿದಂತೆ ನೋಡಿಕೊಳ್ಳುತ್ತಿತ್ತು.[1] ಅಷ್ಟೆ ಅಲ್ಲದೆ ಆಯುಧಗಳು, ಚೂಪಾದ ಕಲ್ಲುಗಳು ಹಾಗೂ ಉಕ್ಕಿನ ಹರಿತವಾದ ಆಯುಧ ಮುಂತಾದವುಗಳನ್ನು ತಯಾರಿಸಲಾಗುತ್ತಿತ್ತು.

ಹೈದರ್ ಮತ್ತು ಟಿಪ್ಪುವಿನ ಕಾಲದ ಆಡಳಿತದಲ್ಲಿ ಕಬ್ಬಿಣ, ಉಕ್ಕು, ಫಿರಂಗಿ, ರೇಷ್ಮೆ, ಹತ್ತಿ, ಉಣ್ಣೆ ಬಟ್ಟೆ, ಬೆಲ್ಲ, ಸಕ್ಕರೆ, ಕಲ್ಲುಸಕ್ಕರೆ, ಕೋವಿ, ಬಂದೂಕು, ತುಪಾಕಿ, ಕತ್ತಿಗಳು, ಗಾಜಿನ ಬಳೆ, ಬಿದಿರಿನ ವಸ್ತುಗಳು, ಮರದ ಗಾಡಿಗಳು, ಲೋಹದಿಂದ ತಯಾರಿಸಿದ ಉಪಕರಣಗಳು, ಮಡಿಕೆ ಮುಂತಾದ ಕೈಗಾರಿಕೆಗಳನ್ನು ವಿವಿಧ ಆಡಳಿತದ ಸ್ಥಳಗಳಾದ ಬೆಂಗಳೂರು, ಮೈಸೂರು, ಶ್ರೀರಂಗಪಟ್ಟಣ, ಗಂಜಾಂ, ತೊಣ್ಣೂರು, ಚಿತ್ರದುರ್ಗ, ಶಿವಮೊಗ್ಗ, ಚನ್ನಪಟ್ಟಣ, ದೊಡ್ಡಬಳ್ಳಾಪುರ, ಕನಕಪುರ, ತುಮಕೂರು, ಮಂಡ್ಯ ಮುಂತಾದ ಸ್ಥಳಗಳಲ್ಲಿ ವಿವಿಧ ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳನ್ನು ಸ್ಥಾಪಿಸಿ ಪ್ರೋತ್ಸಾಹವನ್ನು ನೀಡಿದ್ದರು. ಈ ಅವಧಿಯಲ್ಲಿ ಕೈಗಾರಿಕಾ ಕ್ಷೇತ್ರ ಸಾಕಷ್ಟು ಅಭಿವೃದ್ಧಿ ಹೊಂದಿತು.

ಹೈದರ್ ಮತ್ತು ಟಿಪ್ಪು ತಮ್ಮ ಆಡಳಿತದ ಕಾಲದಲ್ಲಿ ಶ್ರೀರಂಗಪಟ್ಟಣ, ಚನ್ನಪಟ್ಟಣ, ಬೆಂಗಳೂರು, ಧಾರವಾಡ, ಚಿತ್ರದುರ್ಗ, ದೇವನಹಳ್ಳಿ, ಮೈಸೂರು, ಮದ್ದೂರು, ಮಾಗಡಿ, ಕೋಲಾರ, ಮಳವಳ್ಳಿ, ಚಿಕ್ಕಬಳ್ಳಾಪುರ, ಮಂಗಳೂರು, ಬಿದನೂರು, ಶ್ರೀರಂಗಪಟ್ಟಣದ ಕರೀಘಟ್ಟ, ಮಂಡ್ಯ, ಚಿಕ್ಕಬ್ಯಾಳಿಕೆರೆ, ಕಂಕಣಹಳ್ಳಿ (ಕನಕಪುರ), ಶಿವಮೊಗ್ಗ, ಬಾಣಸಮುದ್ರ ಹಾಗೂ ಹಲಸಹಳ್ಳಿ ಮುಂತಾದ ಪ್ರದೇಶಗಳಲ್ಲಿ ವಿವಿಧ ವಸ್ತುಗಳ ತಯಾರಿಕಾ ಕೈಗಾರಿಕೆಗಳನ್ನು ಸ್ಥಾಪಿಸಿದ್ದರು. ಅವುಗಳೆಂದರೆ ಫಿರಂಗಿ, ಬಂದೂಕು, ಮದ್ದು, ಕಬ್ಬಿಣ ಮತ್ತು ಉಕ್ಕು, ಗಾಜು, ಬಳೆ, ರೇಷ್ಮೆ ಬಟ್ಟೆ, ಬಟ್ಟೆಗಳಿಗೆ ಬಣ್ಣ ಹಾಕುವಿಕೆ, ರಾಕೆಟ್ ತಯಾರಿಕೆ, ಉಕ್ಕಿನ ತಂತಿ, ಸೀಸ, ಮರದ ಆಟಿಕೆಯ ವಸ್ತುಗಳು, ಕತ್ತಿಗಳು, ಗುರಾಣಿಗಳು, ತುಪಾಕಿ, ಕೈಗಡಿಯಾರಗಳು,

ಹಡಗು, ಕತ್ತರಿ, ಕಾಗದ, ವಾಚು, ಚಾಕುಗಳು ಮುಂತಾದ ವಸ್ತುಗಳನ್ನು ತಯಾರಿ ಘಟಕಗಳನ್ನು ಸ್ಥಾಪಿಸಿದರು. ಇವರ ಕಾಲದ ನಂತರ ಕ್ರಿ.ಶ. 1801 ರಲ್ಲಿ ವಿವಿಧ ಈ ಪ್ರದೇಶಗಳಿಗೆ ಭೇಟಿ ನೀಡಿದ ಬ್ರಿಟೀಷ್ ಅಧಿಕಾರಿ ಬುಕಾನನ್ 'ಎ ಜರ್ನಿ ಫ್ರಂಮ್ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್' ಎಂಬ ಪ್ರವಾಸ ಕಥನದಲ್ಲಿ ಕೈಗಾರಿಕೋದ್ಯಮಗಳ ಬಗ್ಗೆ ಅತ್ಯಂತ ಉತ್ತಮ ಮಾಹಿತಿಯನ್ನು ನೀಡಿದ್ದಾರೆ. ಈ ಪ್ರವಾಸದ ಕಥನದಲ್ಲಿ ನಮಗೆ ಹೈದರಾಲಿ ಮತ್ತು ಟಿಪ್ಪುವಿನ ಕಾಲದ ಕೈಗಾರಿಕಾ ಬೆಳವಣಿಗೆಯನ್ನು ಅರಿಯಲು ಸೂಕ್ತವಾದುದ್ದು ಎಂದು ಹೇಳಬಹುದಾಗಿದೆ. ನೇಕಾರರು, ಗಾಣಿಗರು, ಕುರುಗಿನಶೆಟ್ಟಿಗಳು, ಬಣ್ಣಗಾರರು, ಪಂಚಾಲರು, ಕೊಮ್ಮರಾರು, ಬಡಗಿಗಳು, ಕುಂಬಾರರು, ಸೊನ್ನಗಾರರು, ಸಿಂಪಿಗರು, ಜೀನಾಗಾರರು, ಮೇದಾರರು, ಉಪ್ಪಾರರು, ನೀಲಗಾರರು, ಬಳೆಗಾರರು, ಕಲ್ಲುಕುಟಿಗರು ಮುಂತಾದ ಸಮುದಾಯಗಳ ಕೈಗಾರಿಕಾ ಕೆಲಸಗಳಲ್ಲಿ ತೊಡಗಿದ್ದರು.

## 2.2 ಬಟ್ಟೆ ತಯಾರಿಕೋದ್ಯಮ

### ಅ) ರೇಷ್ಮೆ ಬಟ್ಟೆ ಕೈಗಾರಿಕೆ :

ರೇಷ್ಮೆ ಕೈಗಾರಿಕೆ ಮೈಸೂರು ರಾಜ್ಯದಲ್ಲಿ ರೇಷ್ಮೆಯನ್ನು ಬಹಳ ಹಿಂದಿನಿಂದಲೂ ಆಮದು ಮಾಡಿಕೊಳ್ಳುತ್ತಿದ್ದರು. ಟಿಪ್ಪು ಇದನ್ನು ಇಲ್ಲೆ ತಯಾರಿಸಲು ತನ್ನ ರಾಜ್ಯದಲ್ಲಿ ಹಿಪ್ಪು ನೇರಳೆ ಕೃಷಿಯನ್ನು ಅಭಿವೃದ್ಧಿಪಡಿಸಲು ಆಸಕ್ತಿ ವಹಿಸಿ ರೈತರಿಗೆ ಪ್ರೋತ್ಸಾಹಿಸಿದನು. ಮೊದಲು ಹಿಪ್ಪೇನೇರಳ ಸೊಪ್ಪನ್ನು ಬೆಳದು ಅದನ್ನು ರೇಷ್ಮೆ ಹುಳುಗಳಿಗೆ ಹಾಕಿದಾಗ ಅದನ್ನು ತಿಂದು ಹುಳುಗಳು ಬೆಳವಣಿಗೆ ಹೊಂದುತ್ತವೆ. ನಂತರ ಅವುಗಳನ್ನು ಬಿದಿರಿನ ತಟ್ಟೆಗಳು ಅಥವಾ ಚಂದ್ರಿಕೆಗೆ ಹಾಕಿದಾಗ 1 ದಿನದ ನಂತರ ನೂಲನ್ನು ಬಿಡಲಾರಂಭಿಸುತ್ತದೆ. 1 ದಿನದಿಂದ 6 ದಿನಗಳೊಳಗೆ ರೇಷ್ಮೆ ನೂಲನ್ನು ತನ್ನ ಸುತ್ತ ಬಿಟ್ಟುಕೊಳ್ಳುತ್ತದೆ. ನಂತರ ಅದನ್ನು ತೆಗೆದುಕೊಂಡು ಬಿಸಿಲಿನಲ್ಲಿ ಒಣಗಿಸುತ್ತಿದ್ದರು ಅಥವಾ ಬಿಸಿ ನೀರಿಗೆ ಹಾಕುತ್ತಿದ್ದರು. ಹುಳುವನ್ನು ನೀರಿನಿಂದ ಬೇರ್ಪಡಿಸಿ ರೇಷ್ಮೆನೂಲಿನ ಗೂಡಿನಿಂದ ಬೇರ್ಪಡಿಸಿ, 4 ರಿಂದ 7 ನೂಲನ್ನ ಕಟ್ಟಿ 1 ನೂಲನ್ನಾಗಿ ಮಾರ್ಪಡಿಸಿ ಫಿಲೇಚಾರ್ ಕೊಡುತ್ತಾರೆ. ಇದರಿಂದ ನೂಲು ಶುಚಿಗೊಂಡು ನಂತರ ಅಂತಿಮವಾಗಿ ವಾರ್ಪ ಯಂತ್ರದಿಂದ ಮತ್ತಷ್ಟು ಶುಚಿಗೊಂಡು, ಅಂತಿಮವಾಗಿ ಬಟ್ಟೆಗೆ ನೂಲಾಗಿ ಸಿದ್ದಗೊಳ್ಳುತ್ತದೆ. ಈ ನೂಲನ್ನು ತೆಗೆದುಕೊಂಡು ಅದಕ್ಕೆ ಬೇಕಾದ ಬಣ್ಣವನ್ನು ಮಿಶ್ರಣಗೊಳಿಸಿ ಬಟ್ಟೆ ತಯಾರಿಸಲಾಗುತ್ತಿದೆ. ರೇಷ್ಮೆಯ ಜ್ಞಾನವನ್ನು ಪರಿಚಯಿಸಲು ಬಂಗಾಳದಿಂದ ರೇಷ್ಮೆ ತಜ್ಞರನ್ನು ಕರೆಸಿಕೊಳ್ಳಲಾಗುತ್ತಿತ್ತು. ಭಾರತದಲ್ಲಿ ಪ್ರಥಮ ಬಾರಿಗೆ ರೇಷ್ಮೆ ಬೆಳೆಯನ್ನು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಕ್ರಿ.ಶ. 1710 ರಲ್ಲಿ ಬಂಗಾಳದಲ್ಲಿ ರೇಷ್ಮೆ ಕೃಷಿಯನ್ನು ಪ್ರಾರಂಭಿಸಿತು. ಬಂಗಾಳ ಸರ್ಕಾರ ಕ್ರಿ.ಶ. 1771 ರಲ್ಲಿ ಚೈನಾದಿಂದ ರೇಷ್ಮೆ ತಳಿಗಳನ್ನು ತಂದು ಕ್ರಿ.ಶ. 1772 ರಲ್ಲಿ ಪ್ರಥಮ ಬಾರಿಗೆ ಫಿಲೇಚರ್ ಅನ್ನು ಪಶ್ಚಿಮ

ಬಂಗಾಳ ಮರ್ಷಿದಾಬಾದ್‌ನಲ್ಲಿ ಆರಂಭಿಸಿತು. ಟಿಪ್ಪು ತನ್ನ ರಾಜ್ಯದ ಜನರಿಗೆ ಕ್ರಿ.ಶ. 1785 ರಲ್ಲಿ ರೇಷ್ಮೆ ಬೆಳೆಯ ಜ್ಞಾನವನ್ನು ಅಭಿವೃದ್ಧಿ ಪಡಿಸುವುದಕ್ಕೋಸ್ಕರ ಬಂಗಾಳಕ್ಕೆ ಕಳುಹಿಸಿಕೊಟ್ಟನು.[2] ಅಷ್ಟೇ ಅಲ್ಲದೆ ರೇಷ್ಮೆ ಉದ್ಯಮದಲ್ಲಿ ವ್ಯಾಪಾರ ಅಭಿವೃದ್ಧಿಗಾಗಿ ಸರ್ಕಾರದ ಒಂದು ವ್ಯಾಪಾರ ಕಂಪನಿಯನ್ನು ಸ್ಥಾಪಿಸಿದನು. ಈ ಕಂಪನಿಗೆ ರೇಷ್ಮೆ ಕೃಷಿಕರು ಮೊದಲಾದ ವರ್ಗದವರನ್ನು ಸೇರಿಸಿಕೊಂಡು ಪ್ರೋತ್ಸಾಹಿಸಲಾಯಿತು. 500 ರೂ.ಗಳಿಗಿಂತ ಹೆಚ್ಚು ಷೇರುಗಳನ್ನು ಯಾರು ಪಡೆದಿರುತ್ತಾರೋ ಅಂತಹವರಿಗೆ ಶೇ. 50 ರಷ್ಟು ಲಾಭ ಪಡೆಯುವ ಸೌಲಭ್ಯವನ್ನು ಕಲ್ಪಿಸಿಕೊಟ್ಟಿದ್ದನು.[3] ಇದರಿಂದ ಚನ್ನಪಟ್ಟಣ, ಕೋಲಾರ, ದೊಡ್ಡಬಳ್ಳಾಪುರ ಮೊದಲಾದ ಪ್ರದೇಶಗಳಲ್ಲಿ ರೇಷ್ಮೆ ಅಭಿವೃದ್ಧಿಯಾಗತೊಡಗಿತು. ಇದರಿಂದಾಗಿ ಟಿಪ್ಪುವಿನ ಕಾಲದಲ್ಲಿ ತಮಿಳುನಾಡಿನ ಬಾರಾಮಹಲ್ ಅನೇಕ ಬಟ್ಟೆ ನೇಯವವರು ಬಂದು ಬೆಂಗಳೂರು ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನೆಲೆಸಿದರು ಎಂದು ಬುಕಾನನ್ ಹೇಳಿದ್ದಾನೆ. ಮೈಸೂರು ರಾಜ್ಯ ಪ್ರವಾಸ ಮಾಡಿದ ಬುಕಾನನ್ ತೊಗಟರು ಎಂಬ ಜನಾಂಗವು ದಪ್ಪ ಹಾಗೂ ಒರಟು ಬಟ್ಟೆಯನ್ನು ಮತ್ತು ಕೆಂಪು ಅಂಚು ಇರುವ ಬಿಳಿಯ ಹತ್ತಿ ಬಟ್ಟೆಯನ್ನು ತಯಾರಿಸುತ್ತಿದ್ದರೆಂದು ತಿಳಿಸಿದ್ದಾನೆ. 'ಪರಕಾಲಿ' ಎಂಬ ಗಟ್ಟಿಯಾದ ಹಾಗೂ ಒರಟಾದ ಬಟ್ಟೆಯನ್ನು ಪಂಚಮರು ಎಂಬ ಜನಾಂಗ ನೇಯ್ಗೆ ಮಾಡುತ್ತಿದ್ದರೆಂದು ಹಾಗೂ ಮಹಿಳೆಯರು ಚರಕದಿಂದ ನೂಲು ತೆಗೆಯುತ್ತಿದ್ದಾರೆಂದು ತಿಳಿಸಿದ್ದಾನೆ. ಟಿಪ್ಪುಸುಲ್ತಾನ್ ಖತ್ರೀಸ ಎಂಬ ಗುಜರಾತಿನ ದಕ್ಷಿಣ ಭಾಗದ ಕ್ಷತ್ರಿಯರನ್ನು ಬೆಂಗಳೂರಿನಲ್ಲಿ ನೆಲೆಸುವಂತೆ ಮಾಡಿ ಅವರಿಂದ ಬೆಲೆ ಬಾಳುವ ಉತ್ತಮ ಬಟ್ಟೆಯನ್ನು ತಯಾರಿಸುತ್ತಿದ್ದಾನೆಂದು ಬುಕಾನನ್ ತಿಳಿಸಿದ್ದಾನೆ. ಚರಕದ ಬಳಕೆ ಕಾಲನಂತರ ಕಡಿಮೆಯಾಯಿತು. ನಂತರ ಮಗ್ಗಗಳನ್ನು ಪ್ರಾರಂಭಿಸಲಾಯಿತು. ಮಗ್ಗಗಳಾದ ಸಾದಾ ಮಗ್ಗ, ಗುಣಿಮಗ್ಗ, ಮಿಲ್ಲುಮಗ್ಗ, ಖಣದ ಮಗ್ಗ, ಪಡಗದ ಮಗ್ಗ ಕಂಬಲಿ ಮಗ್ಗ, ಜಾಡಿಮಗ್ಗ ಮುಂತಾದವು ರೇಷ್ಮೆ ಉತ್ಪಾದನೆ ಆಧಾರದ ಮೇಲೆ ರೂಪುಗೊಂಡವು. ಮಗ್ಗಗಳಿಂದ ತಯಾರಾಗುತ್ತಿದ್ದ ಉತ್ಪಾದನೆಗಳೆಂದರೆ ಹತ್ತಿನೂಲಿನ ಸೀರೆ, ಪಂಚೆ, ಧೋತಿ, ಸಾದಾ ಬಟ್ಟೆ, ಅಂಗಿಬಟ್ಟೆ, ರೇಷ್ಮೆಯ ಸೀರೆ, ಧೋತಿ, ಮಡಿ, ಖಣ, ರುಮಾಲು, ಉಣ್ಣೆ, ಕಂಬಳಿ, ಹತ್ತಿನೂಲಿನ ಸೀರೆ ಮುಂತಾದವುಗಳನ್ನು ತಯಾರಿಸಲಾಗುತ್ತಿತ್ತು.[4]

ಮಗ್ಗದ ಉದ್ದಿಮೆಯಲ್ಲಿ ಹಲುಬೆ, ಅಚ್ಚು,ಲಾಳಿ ಹಣ್ಣು, ಅಂಬತ್ತಿಗೆ ಮುಂತಾದ ಉಪಕರಣಗಳನ್ನು ಬಳಸಲಾಗುತ್ತಿತ್ತು. ಪ್ರಸ್ತುತ ದಿನಗಳಲ್ಲಿ ಮಗ್ಗಗಳು ಸಹ ಕಣ್ಮರೆಯಾಗಿದ್ದು ಹೆಚ್ಚು ಯಂತ್ರೋಪಕರಣಗಳ ಸಹಾಯದಿಂದ ಬಟ್ಟೆಯನ್ನು ತಯಾರಿಸಲಾಗುತ್ತಿದೆ. ರೇಷ್ಮೆ ಬಟ್ಟೆಯ ಕೈಗಾರಿಕೆಗಳು ಬೆಂಗಳೂರಿನ, ಅರಳೇಪೇಟೆ, ಕನಕಪುರ, ದೊಡ್ಡಬಳ್ಳಾಪುರದಲ್ಲಿ ಇದ್ದವು ಹಾಗೆಯೇ ಕೋಲಾರದ ಬಹುತೇಕ ಪ್ರದೇಶಗಳಲ್ಲಿ ಹಾಗೂ ಮೈಸೂರು ಜಿಲ್ಲೆಯ ಎಲ್ಲಾ ಭಾಗಗಳಲ್ಲಿಯೂ ಇದ್ದವು ಅಷ್ಟೇ

ಅಲ್ಲದೆ ತುಮಕೂರಿನ ಪಾವಗಡ, ಕೃಷ್ಣಾಪುರ, ಗುಬ್ಬಿ ಮುಂತಾದ ಪ್ರದೇಶಗಳಲ್ಲಿ ರೇಷ್ಮೆ ಕೈಗಾರಿಕೆಗಳು ಸ್ಥಾಪನೆಗೊಂಡಿದ್ದು.

**ಆ) ಹತ್ತಿಬಟ್ಟೆ:**

ಮೈಸೂರು ರಾಜ್ಯದ ಸ್ತ್ರೀಯರು ಹೆಚ್ಚಾಗಿ ಹತ್ತಿ ನೂಲು ತೆಗೆಯುವ ಕಸುಬಿನಲ್ಲಿ ತೊಡಗಿದ್ದರು. ವಾರದಸಂತೆಗಳಲ್ಲಿ ಬ್ರಾಹ್ಮಣ ಸ್ತ್ರೀಯರ ಹೊರತು ಉಳಿದ ಎಲ್ಲಾ ಜಾತಿಗಳ ಸ್ತ್ರೀಯರು ಬಿಡಿ ಹತ್ತಿಯನ್ನುಕೊಂಡು ಚರಕದಿಂದ ದಾರ ತೆಗೆಯುತ್ತಿದ್ದರು.[5] ಹತ್ತಿಯಲ್ಲಿದ್ದ ಬೀಜವನ್ನು ತೆಗೆದು ಅದನ್ನು ಶುದ್ಧಗೊಳಿಸಿದ ನಂತರ ಅವುಗಳನ್ನು ಕೈ ಗಾತ್ರದ ಉಂಡೆಗಳನ್ನಾಗಿ ಮಾಡಿ ಹತ್ತಿಯನ್ನು ಚರಕಕ್ಕೆ ಸಿದ್ಧವಾಗಿಸುತ್ತಿದ್ದರು. ಬಲಗೈಯಲ್ಲಿ ಚಕ್ರದ ತಿರುಗಣೆ ಇದ್ದರೆ, ಎಡಗೈಯಲ್ಲಿ ಹತ್ತಿ ಹಿಡಿದು ದಾರ ತಯಾರಿಸುತ್ತಿದ್ದರು. ದಾರವನ್ನು ತಯಾರಿಸಿದ ನಂತರ ಚಕ್ರವನ್ನು ಹಿಂತಿರುಗಿಸಿ ದಾರವನ್ನು ಸಂಗ್ರಹಿಸಿ ಮಗ್ಗಕ್ಕೆ ಸಿದ್ಧಮಾಡುತ್ತಿದ್ದರು.[6] ರಾಜ್ಯದ ಮೈದಾನ ಪ್ರದೇಶದ ಎಲ್ಲಾ ಜಿಲ್ಲೆಗಳಲ್ಲೂ ಹತ್ತಿಬಟ್ಟೆ ತಯಾರಿಕೆಗಳು ಕಂಡುಬಂದಿದ್ದು ಬೆಂಗಳೂರಿನಲ್ಲಿ ಹೆಚ್ಚಾಗಿದ್ದವು. ಕೈಮಗ್ಗಗಳಿಂದ ತಯಾರಾದ ಬಟ್ಟೆಗಳೆಂದರೆ ದುಪ್ಪಿ ವಸ್ತರ, ಚೌಕಳಿ ಬಟ್ಟೆ, ಟೇಪು ಮುಂತಾದವು. ಬೆಂಗಳೂರು ನಗರ, ಆನೆಕಲ್ಲು, ದೊಡ್ಡಬಳ್ಳಾಪುರ, ತುಮಕೂರು, ಕೋಲಾರ, ದೊಡ್ಡಬಳ್ಳಾಪುರ, ಮೊಳಕಾಲ್ಮೂರು, ಸೀರೆ ತಯಾರಿಕೆಗೆ ಹೆಸರುವಾಸಿಯಾಗಿದ್ದವು. ಹಿಂದಿನ ಮೈಸೂರು ಜಿಲ್ಲೆಯ ಕಿಕ್ಕೇರಿ, ಮೇಲುಕೋಟೆ, ಹಾಸನದ ಹೊಳೆನರಸೀಪುರಗಳಲ್ಲಿ ಕೈಮಗ್ಗಗಳಿಂದ ಪಂಚೆಗಳನ್ನು ತಯಾರಿಸುತ್ತಿದ್ದರು. ಮೈಸೂರು, ಬೆಂಗಳೂರು, ತುಮಕೂರು ಜಿಲ್ಲೆಗಳಲ್ಲಿ ದುಪ್ಪಟಗಳನ್ನು ನೇಯುತ್ತಿದ್ದರು. ದೇವಾಂಗ ಸಮುದಾಯದವರು ಹತ್ತಿ ಬಟ್ಟೆ ತಯಾರಿಕೆಯಲ್ಲಿ ಹೆಚ್ಚು ತೊಡಗಿಸಿಕೊಂಡಿದ್ದರು.

ಹತ್ತಿ ಬಟ್ಟೆಯನ್ನು ಬೆಂಗಳೂರಿನ ಅರಳೆಪೇಟೆ ಕಂಕನಹಳ್ಳಿ (ಇಂದಿನ ಕನಕಪುರ), ತ್ಯಾಮಗೊಂಡ್ಲು, ದೊಡ್ಡಬಳ್ಳಾಪುರ ಮತ್ತು ಮೈಸೂರಿನ ಗಂಜಾಂ ಹಾಗೂ ಪ್ರತಿ ತಾಲ್ಲೂಕುಗಳಲ್ಲಿಯೂ ತಯಾರಿಸಲಾಗುತ್ತಿತ್ತು. ಅಲ್ಲದೆ ಕೋಲಾರದಲ್ಲಿ ಮಾತ್ರಹಳ್ಳಿ, ತಿರುಮನಹಳ್ಳಿ, ಮಂಚನಬೆಲೆ, ಮೈಲಪ್ಪನಹಳ್ಳಿ, ಬಾಗೇಪಲ್ಲಿ, ಶ್ರೀನಿವಾಸಪುರ, ತಾಯಲೂರು, ತುಮಕೂರಿನ ಮಧುಗಿರಿ, ಕೃಷ್ಣಾಪುರ, ಚಿಕ್ಕನಾಯ್ಕನಹಳ್ಳಿ, ತುರುವೇಕೆರೆ, ಅಣ್ಣಾಪುರ, ಕೊರಟಗೆರೆ, ಶಿವಮೊಗ್ಗದ ಹೊನ್ನಾಳಿ, ಚನ್ನಗಿರಿ, ಚಿತ್ರದುರ್ಗದ ಹೊಸದುರ್ಗ, ಹರಿಹರ, ಮುಂತಾದ ಸ್ಥಳಗಳಲ್ಲಿ ಹತ್ತಿ ಬಟ್ಟೆ ಕೈಗಾರಿಕೆಗಳು ಸ್ಥಾಪನೆಗೊಂಡಿದ್ದವು.[7]

ಇ) **ಉಣ್ಣೆಬಟ್ಟೆ:**

ಉಣ್ಣೆಬಟ್ಟೆಯನ್ನು ತಯಾರಿಸಲು ಕುರಿಗಳ ಉಣ್ಣೆಯನ್ನು ತೆಗೆಯಲು ವರ್ಷಕ್ಕೆ 2 ಬಾರಿ ಅಂದರೆ 6 ತಿಂಗಳಿಗೊಮ್ಮೆ ಕುರಿಗಳನ್ನು ಚೆನ್ನಾಗಿ ಉಜ್ಜಿ ತೊಳೆದು ನಂತರ ಉಣ್ಣೆಯನ್ನು ಕತ್ತರಿಸುತ್ತಿದ್ದರು. ಹೀಗೆ ಸಂಗ್ರಹಿಸಿದ ಉಣ್ಣೆಯನ್ನು ಬಡಿದು ಸ್ವಚ್ಛಗೊಳಿಸುತ್ತಿದ್ದರು. ಇದಾದ ನಂತರ ಸಣ್ಣ ಸಣ್ಣ ಉಂಡೆಗಳನ್ನಾಗಿ ಮಾಡುತ್ತಿದ್ದರು. ಇದು ಹೆಣೆಯಲು ಅನುಕೂಲವಾಗಿತ್ತು. ಈ ಕೆಲಸದಲ್ಲಿ ಸ್ತ್ರೀ ಪುರುಷರಿಬ್ಬರು ಪಾಲ್ಗೊಳ್ಳುತ್ತಿದ್ದರು. ಹುಣಸೆ ಬೀಜವನ್ನು ರಾತ್ರಿಯಲ್ಲಿ ತಣ್ಣೀರಿನಲ್ಲಿ ನೆನೆಸುತ್ತಿದ್ದರು. ನಂತರ ಅದನ್ನು ಚೆನ್ನಾಗಿ ಕುದಿಸಿ ಸೋಸಿ ಉಣ್ಣೆಯ ಮೇಲೆ ಹಾಕುತ್ತಿದ್ದು, ನಂತರ ಮಗ್ಗದಲ್ಲಿ ಉಣ್ಣೆಬಟ್ಟೆ ನೇಯುತ್ತಿದ್ದರು. ಉಣ್ಣೆಬಟ್ಟೆ ತಯಾರಿಕೆಯು ಕೆಳಮಟ್ಟದ್ದಾಗಿತ್ತು ಹಾಗೂ ರಾಜ್ಯದಲ್ಲಿನ ಕುರಿಗಳು ಈ ಉತ್ಪಾದನೆ ಬಳಕೆಗೆ ಸಾಕಾಗುತ್ತಿರಲಿಲ್ಲ. ಆದ್ದರಿಂದ ಮದ್ರಾಸ್‌ನಿಂದನೂ ಸಹ ಉಣ್ಣೆಯು ಆಮದು ಆಗುತ್ತಿತ್ತು.[8] ಉಣ್ಣೆಯಲ್ಲಿ ಪ್ರಮುಖವಾಗಿ ಕಂಬಳಿಗಳು ಮೈಸೂರು, ಮಂಡ್ಯ, ಚಿತ್ರದುರ್ಗ, ಕೋಲಾರ, ಹೂಣಸೂರು ಮುಂತಾದಪ್ರದೇಶಗಳಲ್ಲಿ ತಯಾರಾಗುತ್ತಿದ್ದವು. ಆದರೆ ಈ ಎಲ್ಲಾ ಪ್ರದೇಶಗಳಿಗಿಂತ ಚಿತ್ರದುರ್ಗದಲ್ಲಿ ತಯಾರಾದ ಕಂಬಳಿಗಳು ಗುಣಮಟ್ಟದಿಂದ ಕೂಡಿದ್ದವು. ಆದ್ದರಿಂದ ಆ ಕಂಬಳಿಗಳಿಗೆ ಬೇಡಿಕೆ ಹೆಚ್ಚಾಗಿತ್ತು. ಕಂಬಳಿಗಳಿಗೆ 6 ವರ್ಷದ ಕುರಿಯ ಉಣ್ಣೆಯನ್ನು ಹೆಚ್ಚಾಗಿ ಬಳಸುತ್ತಿದ್ದರು. ಮೈಸೂರು ರಾಜ್ಯದಲ್ಲಿ 6,500 ಕಂಬಳಿ ನೇಯುವ ಮಗ್ಗಗಳಿದ್ದವು. ಈ ಮಗ್ಗಗಳು ಹಾಸನ ಜಿಲ್ಲೆಯ ಹೊಳೆಸರಸೀಪುರ, ಅರಸೀಕೆರ, ಮೈಸೂರು, ಕೋಲಾರ ನಗರ, ಶ್ರೀನಿವಾಸಪುರ, ತುಮಕೂರಿನ ಶಿರಾ, ಪಾವಗಡ, ಚಿಕ್ಕನಾಯಕನಹಳ್ಳಿ, ತಿಪಟೂರು, ಚಿತ್ರದುರ್ಗದ ಹಂಪಾಪುರ ಯಮಚಿಟ್ಟಿ, ಜಗಳೂರುಗಳಲ್ಲಿ ಸ್ಥಾಪನೆಗೊಂಡಿದ್ದವು.

## 2.3 ರತ್ನಗಂಬಳಿ-ಜಮಖಾನ ತಯಾರಿಕೆ :

ಹೈದರಾಲಿ ಮತ್ತು ಟಿಪ್ಪುವಿನ ಆಡಳಿತದಲ್ಲಿ ಬೆಂಗಳೂರಿನಲ್ಲಿ ರತ್ನಗಂಬಳಿ-ಜಮಖಾನ ತಯಾರಿಸುತ್ತಿದ್ದರು. ಈ ರತ್ನಗಂಬಳಿ-ಜಮಖಾನಗಳಿಗೆ ದೇಶೀಯ ಮತ್ತು ವಿದೇಶಿಯ ಸ್ಥಳಗಳಲ್ಲಿ ಬೇಡಿಕೆ ಹೆಚ್ಚಾಗಿ ಕಂಡುಬಂದಿದೆ. ಆದರೂ ಸಹ ವ್ಯಾಪಾರದ ದೃಷ್ಟಿ ವೀಕ್ಷಿಸಿದಾಗ ಕೈಗಾರಿಕೆಗಳು ಹೆಚ್ಚು ಬೃಹತ್ತಾಗಿ ಕಂಡುಬಂದಿರುವುದಿಲ್ಲ. ರತ್ನಗಂಬಳಿಗಳನ್ನು 6-3 ಮತ್ತು 7-4 ಅಡಿ ಅಳತೆಗಳಲ್ಲಿ ಸರ್ದಾರ್, ನವಿಲು ಮುಂತಾದ ಹೆಸರುಗಳಿಂದ ತಯಾರಿಸುತ್ತಿದ್ದರು.[9]

## 2.4 ಯುದ್ಧದ ಉಪಕರಣಗಳ ತಯಾರಿಕಾ ಕೈಗಾರಿಕೆಗಳು:

### ಅ) ಫಿರಂಗಿ:

ಹೈದರ್ ಮತ್ತು ಟಿಪ್ಪು ಹೆಚ್ಚು ಯುದ್ಧಗಳಲ್ಲಿ ನಿರತರಾಗಿದ್ದರು. ಇವರ ಫಿರಂಗಿಗಳ ತಯಾರಿಕೆಗೆ ವಿಶೇಷವಾದ ಗಮನವನ್ನು ನೀಡಿದ್ದರು. ಏಕೆಂದರೆ ಬ್ರಿಟಿಷರು ಆಧುನಿಕ ತಂತ್ರಜ್ಞಾನದ ಸಹಾಯದಿಂದ ಯುದ್ಧ ಉಪಕರಣಗಳಾದ ಬಂದೂಕು, ಫಿರಂಗಿ ಮೊದಲಾದವುಗಳನ್ನು ತಯಾರಿಸಿಕೊಂಡು ಅವುಗಳ ಸಹಾಯದಿಂದ ವಿವಿಧ ಪ್ರದೇಶಗಳನ್ನು ಸುಲಭವಾಗಿ ವಶಪಡಿಸಿಕೊಂಡಿದ್ದರು. ಇದನ್ನು ಅರಿತ ಟಿಪ್ಪು ತನ್ನ ಸಾಮ್ರಾಜ್ಯವನ್ನು ಉಳಿಸಿಕೊಳ್ಳುವುದು, ರಾಜ್ಯವಿಸ್ತಾರ, ಸೈನಿಕ ಶಕ್ತಿಯನ್ನು ವೃದ್ಧಿಗೊಳಿಸುವುದಕ್ಕೋಸ್ಕರ ಕರೀಘಟ್ಟದಲ್ಲಿ ಫಿರಂಗಿಯನ್ನು ತಯಾರಿಸುವಂತಹ ಕಾರ್ಖಾನೆಯನ್ನು ಸ್ಥಾಪಿಸಿದ್ದನು. ಅಲ್ಲಿ ತಯಾರಿಸಿದಂತಹ ಫಿರಂಗಿಗಳನ್ನು ಹಾಗೂ ಯುದ್ಧೋಪಕರಣಗಳನ್ನು ಗರುಡಗಿರಿ ಉಕ್ಕಡದ ಬಳಿ ಇದ್ದ ಸೇನಾ ಠಾಣೆಯಲ್ಲಿ ಫಿರಂಗಿಗಳನ್ನು ಇರಿಸುತ್ತಿದ್ದನು. ಚಂದ್ರವನದ ಬಳಿ ಹಾಗೂ ಗಂಜಾಂಗಳಲ್ಲಿಯೂ ಸಹ ತೋಪಿನ ಖಾನೆಗಳನ್ನು ಸ್ಥಾಪಿಸಿದ್ದನು.[10] ಬುಕಾನನ್ ತನ್ನ ಪ್ರವಾಸದಲ್ಲಿ ಫಿರಂಗಿಗಳನ್ನು ಕೊರೆಯುವಯಂತ್ರಗಳನ್ನು ನೋಡಿದ್ದು, "ಫ್ರೆಂಚ್ ಕಲಾವಿದನೊಬ್ಬನು ಒಂದು ಯಂತ್ರವನ್ನು ವಿನ್ಯಾಸಗೊಳಿಸಿದ್ದನು. ಅದು ನೀರಿನಿಂದ ನಡೆಯುತ್ತಾ ಫಿರಂಗಿಯನ್ನು ಕೊರೆಯುತ್ತಿತ್ತು ಎಂದು ಹೇಳಿದ್ದಾನೆ."[11] ಹಾಗೆಯೇ ಕಂಕನಹಳ್ಳಿ (ಕನಕಪುರದಲ್ಲಿ) ಲ್ಲಿಯೂ ಸಹ ಫಿರಂಗಿ ತಯಾರಿಸುವ ಕುಲುಮೆಯನ್ನು ಸ್ಥಾಪಿಸಲಾಗಿತ್ತು. ಒಟ್ಟಾರೆ ಎಲ್ಲಿ ಕಬ್ಬಿಣ ಉಕ್ಕಿನ ಕಾರ್ಖಾನೆಗಳನ್ನು ಸ್ಥಾಪಿಸಿದ್ದರೋ ಅಲ್ಲಿ ಹೆಚ್ಚು ಆಯುಧ ಕಾರ್ಖಾನೆಗಳನ್ನು ಸ್ಥಾಪಿಸಿದ್ದರು.[12]

### ಆ) ಬಂದೂಕು, ಕೋವಿ ಮತ್ತು ತುಪಾಕಿ:

ಬಂದೂಕು, ಕೋವಿ ಮತ್ತು ತುಪಾಕಿ ತಯಾರಿಕೆಯಲ್ಲಿ ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಉತ್ತಮವಾದ ಗುಣಮಟ್ಟದ ಹಾಗೂ ಆಕರ್ಷಕ ಕೌಶಲವನ್ನು ಬಳಸಿದ್ದರು. ಈ ಕುರಿತು ಕಿರ್ಮಾನಿಯು ತನ್ನ ವಿವರಣೆಯಲ್ಲಿ ಈ ರೀತಿ ಹೇಳಿದ್ದಾನೆ. "ಅವರ ಕೆಲಸಗಾರರು ಅದ್ಭುತವಾಗಿ ಬಂದೂಕುಗಳನ್ನು, ಸಿಂಹಮುಖದ ತುಪಾಕಿಗಳನ್ನು ತಯಾರಿಸುತ್ತಿದ್ದರು ಹಾಗೂ 3 ಅಥವಾ ನಳಿಕೆಗಳ ಕೋವಿಗಳನ್ನು ತಯಾರಿಸುತ್ತಿದ್ದರು. ಅಷ್ಟೇ ಅಲ್ಲದೆ ಕೋವಿಯ ಗುಂಡು ಭೇದಿಸಬಾರದಂತಹ ಉತ್ತಮ ಗುಣಮಟ್ಟದ ಗುರಾಣಿಯನ್ನು ತಯಾರಿಸಿದ್ದರು" ಎಂದು ಹೇಳಿದ್ದಾನೆ. ಬಂದೂಕು ಮತ್ತು ಕೋವಿಗಳನ್ನು ಯುರೋಪ್ ಮಾದರಿಯಲ್ಲಿ ತಯಾರಿಸಲಾಗಿತ್ತು. ಅದರಲ್ಲೂ ವಿಶೇಷವಾಗಿ ಟಿಪ್ಪು ಫ್ರೆಂಚ್ ದೇಶದ ಮೇಲೆ ಪ್ರೀತಿಯನ್ನು ಹೊಂದಿದ್ದರಿಂದ ಫ್ರೆಂಚ್ ವಿನ್ಯಾಸದಲ್ಲಿ ತಯಾರಿಸುತ್ತಿದ್ದನು. ಹೈದರ್ ಸೇನೆಯಲ್ಲಿದ್ದ ಮಾನ್ಸಿಯಲ್ ಲಾಪೋಲಿ ಎಂಬುವನು ಬಂದೂಕು ಮತ್ತು ತೂಪಾಕಿ ತಯಾರಿಸುವ ಪ್ರಧಾನ

ವಿನ್ಯಾಸಕಾರನಾಗಿದ್ದನು. ಮೂರ್‌ನು ಬೆಂಗಳೂರಿನಲ್ಲಿ ಒಂದು ಸರಳ ರಚನೆಯಿದ್ದಂತ ಯಂತ್ರ ಮತ್ತು ಒಂದು ಜೊತೆ ಎತ್ತುಗಳ ಸಹಾಯದಿಂದ ಅಲ್ಲಿ ಹೇಗೆ ಕೋವಿಗಳನ್ನು ತಯಾರಿಸುತ್ತಿತ್ತು ಎಂದು ಹೇಳಿದ್ದಾನೆ. ಅದು ಹೇಗೆಂದರೆ ಏಕಕಾಲದಲ್ಲಿ ಆ ಒಂದು ಯಂತ್ರವು 50 ಕೋವಿಗಳು ಮತ್ತು ಒಂದು ಬಂದೂಕಿನ ನಳಿಕೆಯನ್ನು ಕೊರೆಯುತ್ತಿತ್ತು ಎಂದು ತಿಳಿಸಿದ್ದಾನೆ. ಹಾಗೆಯೇ ಇನ್ನೊಬ್ಬ ಸಮಕಾಲೀನ ಪ್ರವಾಸಿ ಇತಿಹಾಸಕಾರನು ಕೂಡ ಈ ರೀತಿ ಇದ್ದ ಯಂತ್ರವು ಒಂದು ಸಾರಿಗೆ 130 ಕೋವಿಗಳಿಗೆ ನಳಿಕೆಗಳನ್ನು ಕೊರೆದದ್ದನ್ನು ನೋಡಿದ್ದಾಗಿ ಹೇಳಿದ್ದಾನೆ. ಅಲ್ಲಿಗೆ ಜನರು ಬಂದು ನೆಲಸುವಂತೆ ಜನರಿಗೆ ಹೈದರನು ಹೇಳಿದ್ದನು ಎಂದು ಬುಕಾನನ್ ತಿಳಿಸಿದ್ದಾನೆ.[13]

**ಇ) ಯುದ್ಧದ ಮದ್ದು:**

ಹೈದರ್ ಮತ್ತು ಟಿಪ್ಪು ಶ್ರೀರಂಗಪಟ್ಟಣದ ಬಳಿ ಗಂಜಾಂ ಹಾಗೂ ಚಂದ್ರವನದಲ್ಲಿ ಮದ್ದು ಅರೆಯುವ ಕಾರ್ಖಾನೆ ಮತ್ತು ಮದ್ದಿನ ಮನೆಗಳನ್ನು ಸ್ಥಾಪಿಸಿದ್ದನು. ಈ ಪ್ರದೇಶದಲ್ಲಿ ತಯಾರಾದ ಮದ್ದುಗಳನ್ನು ಈಗಿನ ಬೆಂಗಳೂರು-ಮೈಸೂರು ರೈಲು ಹಳಿಯ ಸಮೀಪವಿರುವ ಗಾರೆಯಿಂದ ಕಟ್ಟಿರುವಂತಹ ನೆಲಮಾಳಿಗೆ ಮನೆಯಲ್ಲಿ ಇಡಲಾಗುತ್ತಿತ್ತು. ಹಾಗೆಯೇ ಕರೀಘಟ್ಟ ಮತ್ತು ಗಂಜಾಂ ಸ್ಥಳಗಳಲ್ಲಿ ಟಿಪ್ಪು ಯುದ್ಧದ ಮದ್ದನ್ನು ಶೇಖರಿಸಿಡುತ್ತಿದ್ದನು.

**ಈ) ರಾಕೆಟ್ ತಯಾರಿಕೆ:**

ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿ ಯುದ್ಧಕ್ಕೆ ರಾಕೆಟ್‌ಗಳನ್ನು ತಯಾರಿಸಿ ಬಳಸುತ್ತಿದ್ದರು. ಆಗಿನಕಾಲದಲ್ಲಿ ಯುದ್ಧಗಳು ಸಂಭವಿಸಿದ ಸ್ಥಳಗಳಲ್ಲಿ ರಾಕೆಟ್‌ಗಳಿಗೆ ಸಂಬಂಧಿಸಿದಂತೆ ತುಣುಕುಗಳು ಸಿಕ್ಕಿವೆ. ರಾಕೆಟ್‌ಗಳು ಟಿಪ್ಪು ಕಾಲದಲ್ಲಿ ಸುಧಾರಣೆಗೊಂಡಿದ್ದವು. ಟಿಪ್ಪು ಬೆಂಗಳೂರಿನಲ್ಲಿ ಒಂದು ರಾಕೆಟ್ ತಯಾರಿಕಾ ಕಾಖಾನೆಯನ್ನು ಸ್ಥಾಪಿಸಿದ್ದನು.[14] ಈ ರಾಕೆಟ್‌ಗಳನ್ನು ಕಬ್ಬಿಣ ಕೊಳವೆಯಿಂದ ನಿರ್ಮಿಸಿ ಉಪಯೋಗಿಸುತ್ತಿದ್ದರು. ಕಬ್ಬಿಣದ ಕೊಳವೆಗಳಲ್ಲಿ ಮದ್ದನ್ನು ತುಂಬಿ ಉಪಯೋಗಿಸುತ್ತಿದ್ದದ್ದು ಇದರ ಸಹಾಯ ಹೆಚ್ಚು ಪರಿಣಾಮಕಾರಿಯಾಗಿತ್ತು. ಶಿವಮೊಗ್ಗದಲ್ಲಿ ಸಿಕ್ಕಿದ ರಾಕೆಟ್‌ನ ಕಬ್ಬಿಣದ ತುಣುಕು ಮೆದು ಕಬ್ಬಿಣದ ಲೋಹದಿಂದ ತಯಾರಿಸಿದ್ದು ಇದನ್ನು ಸಾಮಾನ್ಯವಾಗಿ ಚಿಕ್ಕ ಕಾರ್ಖಾನೆಗಳಲ್ಲಿ ತಯಾರಿಸಬಹುದಾಗಿತ್ತು. ಕಬ್ಬಿಣ ಕೊಳವೆಗಳಲ್ಲಿ ಮದ್ದನ್ನು ಹೆಚ್ಚಾಗಿ ತುಂಬುತ್ತಿದ್ದರು. ತುಂಬಿದ ಕೊಳವೆಗೆ ಬಾಯಿಯನ್ನು ಹಾಗೂ ಇನ್ನೊಂದು ಭಾಗದ ಬಾಯಿಯನ್ನು ಕಬ್ಬಿಣದ ಲೋಹದಿಂದ ಮುಚ್ಚಲಾಗುತ್ತಿತ್ತು. ಮುಚ್ಚಳಿಕೆ ಬಾಯಿಯಲ್ಲಿ ಒಂದು ಸಣ್ಣ ರಂಧ್ರವನ್ನು ಮಾಡಿ ಅದರಿಂದ ಮುದ್ದಿಗೆ ತಲುಪುವ ರೀತಿಯಲ್ಲಿ ಹತ್ತಿಯ ಬತ್ತಿಯನ್ನು ಸಂಪರ್ಕಿಸಲಾಗುತ್ತಿತ್ತು. ನಂತರ ಈ ಕೊಳವೆಗೆ ಸುಮಾರು 5 ರಿಂದ 6 ಅಡಿ ಉದ್ದದ ಬಿದರಿನ ಕೋಲಿಗೆ, ಮದ್ದು ತುಂಬಿದ ಕಬ್ಬಿಣ ತುಂಡು ಸೇರಿಸಿ ಚರ್ಮದ ಪಟ್ಟಿಯನ್ನು

ಕಟ್ಟಲಾಗುತ್ತಿತ್ತು. ಬಿದುರಿನ ಕೋಲು ರಾಕೆಟ್ ನಿರ್ದಿಷ್ಟ ಗುರಿಯ ದಿಕ್ಕನ್ನು ತಲುಪಲು ಅತ್ಯಂತ ಸಹಕಾರಿಯಾಗಿತ್ತು. ಟಿಪ್ಪು ರಾಕೆಟ್ ಶಕ್ತಿಯನ್ನು ಅರಿತಿದ್ದರಿಂದ ಅದಕ್ಕೆ ತನ್ನ ಸೈನ್ಯದಲ್ಲಿ ಹೆಚ್ಚಿನ ಮಹತ್ವವನ್ನು ನೀಡಿದ್ದನು. ಹಾಗಾಗಿ ಅವನ ಸೈನ್ಯದಲ್ಲಿ 1200 ರಿಂದ 5000ದ ರಾಕೆಟ್ ದಳವನ್ನು ನಿರ್ಮಿಸಿದ್ದನು. 2ನೇ ಮೈಸೂರು ಯುದ್ಧದಲ್ಲಿ ಪೊಲ್ಲಲೂರಿನಲ್ಲಿ ಆಂಗ್ಲರೊಡನೆ ನಡೆದ ಯುದ್ಧದಲ್ಲಿ ಹಾಗೂ ಶ್ರೀರಂಗಪಟ್ಟಣದಲ್ಲಿ ನಡೆದ ಯುದ್ಧದಲ್ಲಿ ರಾಕೆಟ್‌ಗಳನ್ನು ಬಳಸಿ ಆಂಗ್ಲರ ಸೈನ್ಯಕ್ಕೆ ನಷ್ಟವನ್ನು ಉಂಟು ಮಾಡಿದ್ದನು. ಆಂಗ್ಲರು ಶ್ರೀರಂಗಪಟ್ಟಣದ ಪತನದ ನಂತರ ಇಲ್ಲಿನ ರಾಕೆಟ್‌ಗಳನ್ನು ಇಂಗ್ಲೆಂಡಿಗೆ ತೆಗೆದುಕೊಂಡು ಹೋಗಿ ಅಲ್ಲಿ ವಿನಿಯಂತ್ ಕಾಂಗ್ರಿವ್ ಎಂಬಾತ ರಾಕೆಟ್‌ಗಳಲ್ಲಿ ಮತ್ತಷ್ಟು ಸುಧಾರಿಸಿದನು. ನಂತರ ಆಂಗ್ಲರು ಯುದ್ಧದಲ್ಲಿ ಅವುಗಳನ್ನು ಬಳಸಿದರು. ಟಿಪ್ಪು ಕಾಲದ ಎರಡು ರಾಕೆಟ್‌ಗಳು ಇಂಗ್ಲೆಂಡಿನ ಹಲ್‌ವಿಕ್‌ನಲ್ಲಿರುವ ರಾಯಲ್ ಅರ್ಟಿಲರಿ ವಸ್ತು ಸಂಗ್ರಹಾಲಯದಲ್ಲಿ ಸಂರಕ್ಷಿಸಿ ಇಡಲಾಗಿದೆ. ರಾಕೆಟ್ ಕ್ಷಿಪಣಿ ತಜ್ಞ ಅಬ್ದುಲ್ ಕಲಾಂರವರು ಸಹ ವೀಕ್ಷಣೆ ಮಾಡಿ ಅದರ ಬಗ್ಗೆ ಮಾಹಿತಿ ನೀಡಿದ್ದಾರೆ.[15]

ಬೆಂಗಳೂರು ಸರ್ಕಾರಿ ವಸ್ತು ಸಂಗ್ರಹಾಲದಲ್ಲಿ 3 ರಾಕೆಟ್‌ಗಳು ಹಾಗೂ ಶಿವಮೊಗ್ಗದ ಸರ್ಕಾರಿವಸ್ತು ಸಂಗ್ರಹಾಲಯದಲ್ಲಿಯೂ ರಾಕೆಟ್‌ಗಳನ್ನು ಸಂಗ್ರಹಿಸಲಾಗಿದೆ. ಇಲ್ಲಿ ಬಿಟ್ಟರೆ ಭಾರತದಲ್ಲಿ ಬೇರೆಲ್ಲೂ ಕೂಡ ಆತನ ಕಾಲದ ರಾಕೆಟ್‌ಗಳು ಕಂಡು ಬಂದಿರುವುದಿಲ್ಲ. ಬೆಂಗಳೂರಿನ ಸರ್ಕಾರಿ ವಸ್ತು ಸಂಗ್ರಹಾಲಯದಲ್ಲಿರುವ 3 ರಾಕೆಟ್‌ಗಳ ವಿವರ ಹೇಗಿದೆ. ಈ 3 ರಾಕೆಟ್‌ನಲ್ಲಿ ಮದ್ದು ಇರುವುದಿಲ್ಲ ಹಾಗೂ ಬತ್ತಿ ಇರುವುದಿಲ್ಲ. ಒಂದು ರಾಕೆಟ್‌ನ ಕಬ್ಬಿಣದ ಕೊಳವೆಗೆ ಚರ್ಮದ ಪಟ್ಟಿಯಿಂದ ಬಿದಿರಿನ ಕೋಲಿಗೆ ಸೇರಿಸಿ ಕಟ್ಟಲಾಗಿದೆ. ಕೆಲವು ರಾಕೆಟ್‌ನಲ್ಲಿ ಚರ್ಮದ ಪಟ್ಟಿ ನಾಶವಾಗಿದೆ. ಶಿವಮೊಗ್ಗ ಜಿಲ್ಲೆಯ ವಸ್ತು ಸಂಗ್ರಹಾಲಯದಲ್ಲಿರುವ ರಾಕೆಟ್ ತುಣಕುಗಳಲ್ಲಿ ರಾಕೆಟ್‌ನ ತೋಟಕ್ಕೆ ತುಂಬಿದ ಮದ್ದು ಇನ್ನೂ ಹಾಗೆ ಇದೆ. ರಾಕೆಟ್‌ಗಳ ತುಣುಕು ಬಾವಿಯಲ್ಲಿ ಸಿಕ್ಕದ್ದರಿಂದ ನೀರಿನಿಂದ ರಾಕೆಟ್ ಬಿದಿರಿನ ಕೋಲು ಹತ್ತಿಯ, ಬತ್ತಿ ನಾಶವಾಗಿದೆ. ಈ ರಾಕೆಟ್‌ನಲ್ಲಿ ವಿಶೇಷವೆಂದರೆ, ಕಬ್ಬಿಣದ ಕೊಳವೆಗಳೊಂದಿಗೆ ದೊರೆತ ಕಟ್ಟಿಗೆಯ ರಾಕೆಟ್ ಕಂಡು ಬಂದಿದೆ.[16]

**2.5 ಕಬ್ಬಿಣ :**

ಕಬ್ಬಿಣ ತಯಾರಿಕೆಯು ಮೈಸೂರು ಸಂಸ್ಥಾನದ ಪ್ರಮುಖ ಕೈಗಾರಿಕೆಯಾಗಿತ್ತು. ಟಿಪ್ಪು ಸುಲ್ತಾನನು "ಯಾರು ಕಬ್ಬಿಣವನ್ನು ತಯಾರಿಸಿಕೊಡುವರೋ ಅವರಿಗೆ ಹೆಚ್ಚಿನ ಹಣ ಪಾವತಿ ಮಾಡುತ್ತಿದ್ದನು. ಹಾಗಾಗಿ ಯಾರು ಕಬ್ಬಿಣವನ್ನು ತಯಾರಿಸುತ್ತಾರೋ ಅಂತವರಿಗೆ ವರ್ಷ ಪೂರ್ತಿ ಕೆಲಸವಿರುತ್ತಿತ್ತು."[17] ಕಬ್ಬಿಣವನ್ನು ತಯಾರಿಸುವ ಕುಲುಮೆಯು ಹೈದರಾಲಿ, ಟಿಪ್ಪು ಕಾಲದಲ್ಲಿ ಕಂಡು ಬಂದಿದ್ದು ಕಬ್ಬಿಣವನ್ನು ತಯಾರಿಸಲು ಕಬ್ಬಿಣದ ಅದಿರು, ಜೇಡಿ ಮಣ್ಣು ಅಥವಾ ಸುಣ್ಣದ ಕಲ್ಲು ಮತ್ತು

ಉರುವಲಿಗೆ ಅವಶ್ಯಕವಾದ ಕಚ್ಚಾ ಸಾಮಾಗ್ರಿಗಳು ಅತಿ ಅವಶ್ಯಕವಾಗಿದ್ದವು. ಬುಕಾನನ್ ತನ್ನ ಪ್ರವಾಸವನ್ನು ಮಾಡಿದಾಗ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಕಬ್ಬಿಣ ಕಲುಮೆಗಳನ್ನು ನೋಡಿ ಗಮನಿಸಿ ಅದರ ಬಗ್ಗೆ ವಿವರಣೆಯನ್ನು ನೀಡಿದ್ದಾನೆ. ಬುಕಾನನ್ ಕ್ರಿ.ಶ. 1801ರ ಮೇ ತಿಂಗಳಿನ 3ನೇ ದಿನಾಂಕದಂದು ಚಿತ್ರದುರ್ಗದಲ್ಲಿದ್ದ 2 ಕುಲುಮೆಗಳಿಗೆ ಭೇಟಿ ನೀಡಿ ಅವುಗಳನ್ನು ಪರೀಕ್ಷಿಸಿ ಅಲ್ಲಿ ಹೇಗೆ ಕಬ್ಬಿಣದಧಾತುವನ್ನು ಎರಕ ಹೊಯ್ಯುತ್ತಿದ್ದರೆಂಬುದನ್ನು ತಿಳಿಸಿದ್ದಾರೆ. "ಇಲ್ಲಿ ಕಬ್ಬಿಣದ ಉತ್ಪಾದನೆಗಾಗಿ ಕಬ್ಬಿಣದ ಅದಿರನ್ನು ಸಣ್ಣ ಸಣ್ಣ ಚೂರುಗಳನ್ನಾಗಿ ಮಾಡಿ ಅದನ್ನು ಕತ್ತೆಗಳು ಹಾಗೂ ಕೋಣಗಳ ಮೇಲೆ ಸಾಗಿಸುತ್ತಿದ್ದರು ಎಂದು ಹೇಳಿದ್ದಾರೆ ಹಾಗೂ ಈ ಇಲ್ಲಿನ ಅದಿರಿನ ಚೂರುಗಳ ಜೊತೆಗೆ ಇದ್ದಿಲಿನ ಚೂರುಗಳನ್ನು ಸಹ ಮಿಶ್ರಣ ಮಾಡಿ ಅದನ್ನು ಸಮವಾಗಿ ತೂಕ ಮಾಡಿ ಮಿಶ್ರಣ ಮಾಡಿ ಕಳುಹಿಸಿಕೊಡಲಾಗುತ್ತಿದ್ದು, ಇಲ್ಲಿ ಕಬ್ಬಿಣ 19% ರಿಂದ 27% ತನಕ ಉತ್ಪಾದನೆಯಾಗುತ್ತಿತ್ತು. ಪ್ರತಿದಿನ ಇಲ್ಲಿ ತಯಾರಿಸುತ್ತಿದ್ದ ನೇಗಿಲುಗಳನ್ನು ವಿವಿಧ ವೃತ್ತಿ ಪರ ವ್ಯಕ್ತಿಗಳಿಗೆ ನೀಡಲಾಗುತ್ತಿತ್ತು."[18] ಬುಕಾನನ್ ಕರ್ನಾಟಕ ವಿವಿಧ ಪ್ರದೇಶಗಳಿಗೆ ಭೇಟಿ ನೀಡಿದಾಗ ತಾನು ಚೌಕಕಾರದ ಕುಲುಮೆಗಳನ್ನು ನೋಡಿದ್ದಾಗಿಯೂ ಹೇಳಿ ಚೌಕಕಾರದ ಕುಲುಮೆಗಳಲ್ಲಿ ಹೇಗೆ ಕಬ್ಬಿಣ ಅದಿರನ್ನು ಕರಗಿಸಿ ಕಬ್ಬಿಣವನ್ನು ಉತ್ಪಾದಿಸಲಾಗುತ್ತಿತ್ತು. ಎಂಬ ಮಾಹಿತಿಯನ್ನು ನೀಡಿದ್ದಾನೆ.

### 2.6 ಉಕ್ಕು ತಯಾರಿಕೆ :

ದಕ್ಷಿಣ ಭಾರತದಲ್ಲಿ ಪ್ರಮುಖವಾಗಿ 2 ರೀತಿಯಲ್ಲಿ ಉಕ್ಕನ್ನು ತಯಾರಿಸಲಾಗುತ್ತಿತ್ತು. ಅವುಗಳೆಂದರೆ ಇಂಗಾಲದ ಸಂಯೋಗಿಕರಣ ಮತ್ತು ಸೇಲಂ ಕಲುಮೆಗಳು. ಹೈದಾರಬಾದ್ ಮತ್ತು ಮೈಸೂರು ಪ್ರಾಂತ್ಯಗಳಲ್ಲಿ ಪುಟ್ಟ ಕುಲುಮೆಗಳ ವಿಧಾನವು ಬಳಕೆಯಲ್ಲಿತ್ತು. ಬುಕಾನನ್ ತನ್ನ ಪ್ರವಾಸದಲ್ಲಿ ಕರ್ನಾಟಕದ ತುಮಕೂರು ಜಿಲ್ಲೆಯ ದೇವರಾಯನ ದುರ್ಗದಲ್ಲಿ ಕಂಡ ಉಕ್ಕನ್ನು ಉತ್ಪಾದಿಸುವ ಕುಲುಮೆಯ ಕುರಿತು ತಿಳಿಸಿದ್ದಾನೆ. ಆತನ ವೀಕ್ಷಣೆಯ ವಿವರಣೆ ಹೀಗಿದೆ. "ಈ ಕುಲುಮೆಯ ಒಂದು ಗುಡಿಸಿಲಿನಲ್ಲಿದ್ದು ಅದು ಊರ್ಧ್ವಮುಖವಾದ ಮೂಸೆಗಳನ್ನು ಇಡುವ ಕುಲುಮೆಯ ಪ್ರದೇಶವು ಅದರ ಸಮತಲದಲ್ಲಿರುವ ಬೂದಿಯನ್ನು ಶೇಖರಿಸುವ ಚೌಕಾಕಾರದ ಕುಳಿಯನ್ನು ಸೇರುವಂತೆ ಅದಕ್ಕೆ ಒಂದು ಕಾಲುವೆ ಮಾದರಿ ಇತ್ತು. ಬೂದಿ ಅಥವಾ ಕಿಟ್ಟವನ್ನು ಹೊರತೆಗೆಯಲು ಒಂದು ದ್ವಾರವನ್ನು ಒಳಗೊಂಡಿತ್ತು. ಬೂದಿ ಅಲ್ಲಿ ಶೇಖರಿಸಿ ಕೊಳ್ಳುತ್ತಿತ್ತು. ಅದನ್ನು ಹೊರ ತೆಗೆಯಲು ಇದು ಉಪಯುಕ್ತಕರವಾಗಿತ್ತು. ಕೆಲಸವನ್ನು ಮಾಡುವವರು ಹಾಗೂ ಬೂದಿಯನ್ನು ಹೊರ ತೆಗೆಯುವವರು ಶಾಖದಿಂದ ತಪ್ಪಿಸಿಕೊಳ್ಳಲು ಹಾಗೂ ಕಿಡಿಯಿಂದ ರಕ್ಷಣೆ ಮಾಡಿಕೊಳ್ಳಲು ಒಂದು ಗೋಡೆಯನ್ನು ನಿರ್ಮಿಸಿಕೊಳ್ಳುತ್ತಿದ್ದರು. ಕುಲುಮೆಯ ಮೂಸೆ ಇಡುವ ಸ್ಥಳದಲ್ಲಿ ಇರುವಂತೆ ಮಣ್ಣಿನ ನಳಿಕೆಯನ್ನು ಅಳವಡಿಸಿ ಗಾಳಿಯನ್ನು ತಿದಿಯ

ಮೂಲಕ ಕುಲುಮೆಗೆ ಒದಗಿಸಲಾಗುತ್ತಿತ್ತು. ಇದು ಗೋಡೆಯ ಹಿಂಭಾಗದಲ್ಲಿನ ತಿದಿಯೊಂದಿಗೆ ಸಂಪರ್ಕವನ್ನು ಏರ್ಪಡಿಸಿ ತಿದಿಯು ಮಣ್ಣಿನ ಇಳಿಜಾರದ ಜಗತಿಯ ಮೇಲೆ ಇರುತ್ತಿತ್ತು. ಮಣ್ಣಿನ ಮೂಸೆಯಲ್ಲಿ ಒಂದು ಚೂರು ಮೆದು ಕಬ್ಬಿಣ ಹಾಕಿ ಮೂಸೆಯನ್ನು ತೇವಾಂಶ ಭರಿತವಾದ ಮಣ್ಣಿನಲ್ಲಿ ಮುಚ್ಚಿ ಒಣಗಿಸುತ್ತಿದ್ದರು. ಇಂತಹ 15 ಮೂಸೆಗಳನ್ನು ಒಂದು ಬಾರಿಗೆ ಕುಲುಮೆಯಲ್ಲಿ ಇಡುತ್ತಿದ್ದರು. ಇಲ್ಲಿ ಬೇರೆ ಸ್ಥಳಗಳಿಂದ ತಂದ ಮೆದು ಕಬ್ಬಿಣವನ್ನು ಉಕ್ಕಾಗಿ ತಯಾರಿಸುತ್ತಿದ್ದರು. ಆದರೆ ಇಲ್ಲಿ ತಯಾರಾದ ಉಕ್ಕನ್ನು ಶುದ್ಧೀಕರಿಸಲು ಬಡಿಯುವ ಕುಲುಮೆಯನ್ನು ಬಳಸುತ್ತಿದ್ದರು."[19] ಬುಕಾನನ್ ಬಡಿಯುವ ಕುಲುಮೆಯನ್ನು ಈ ಕೆಳಕಂಡಂತೆ ವಿವರಿಸಿದ್ದಾನೆ: "ತಿದಿಗಳ ನಡುವೆ ಹಾಗೂ ಕುಲುಮೆಯ ಕುಳಿಯ ನಡುವೆ ಒಂದು ಮಣ್ಣಿನ ಗೋಡೆ ಇರುತ್ತಿತ್ತು. ಈ ಗೋಡೆಯು 18 ಅಂಗುಲ ಉದ್ದ, 10 ಅಂಗುಲ ಎತ್ತರ ಹಾಗೂ 4 ಅಂಗುಲ ದಪ್ಪವಿತ್ತು. ಇದರ ಸಹಾಯದಿಂದ ಉಕ್ಕನ್ನು ಶುದ್ಧೀಕರಿಸುವವರಿಗೆ ಉಕ್ಕಿನಿಂದ ಹೊರ ಬರುವ ಶಾಖ ಹಾಗೂ ಕಿಡಿಯಿಂದ ರಕ್ಷಿಸಿಕೊಳ್ಳಲು ಅನುಕೂಲವಾಗುತ್ತಿತ್ತು. ಈ ಗೋಡೆಗೆ ಕುಲುಮೆಯ 3 ಮುಖಗಳಿದ್ದು 1 ಮುಖವು ಧಾತುವನ್ನು ಒಳ ಇಡಲು ಹಾಗೂ ಹೊರ ತೆಗೆಯಲು ಸಹಕಾರಿಯಾಗುತ್ತಿತ್ತು. ಅನುಕೂಲಕ್ಕೆ ತಕ್ಕಂತೆ ಮುಖವನ್ನು ನಿರ್ಮಿಸಿ ಕೊಂಡಿದ್ದರು. ಈ ಗೋಡೆಯನ್ನು ಮಣ್ಣಿನಿಂದ ಸಮತಲವಾಗಿ ರಚಿಸಿದ ಹಲಗೆಯಿಂದ ಮುಚ್ಚಿರುವುದು ಈ ರೀತಿಯಾದಂತಹ ಕುಲುಮೆಯ ಮುಂಭಾಗದಲ್ಲಿ 18 ಅಂಗುಲ ಉದ್ದ 12 ಅಂಗುಲ ಅಗಲ, 3 ಅಂಗುಲ ದಪ್ಪವಾದ ಹಾಸುಗಲ್ಲು ಇರುತ್ತಿತ್ತು. ಮುಂಭಾಗದಲ್ಲಿ ದೀರ್ಘ ವೃತ್ತಕರವಾಗಿರುತ್ತಿತ್ತು. ಅಷ್ಟೇ ಅಲ್ಲದೆ ಕುಲುಮೆಯ ಕುಳಿಗೆ ಕಿಟ್ಟ ಅಥವಾ ಅನವಶ್ಯಕವಾದ ವಸ್ತುಗಳು ಅದರಲ್ಲಿ ಬೀಳುವ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು."[20]

**2.7 ಬೆಲ್ಲ ತಯಾರಿಕೆ ಆಲೆಮನೆಗಳು:**

ಮದ್ದೂರು ಹಾಗೂ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಹೆಚ್ಚಾಗಿ ಬೆಲ್ಲವನ್ನು ತಯಾರಿಸುತ್ತಿದ್ದರು. ಇಲ್ಲಿ ಹೆಚ್ಚಾಗಿ ತಾಳೆಯ ರಸದಿಂದ ತಾಟೆ ಬೆಲ್ಲವನ್ನು ಹಾಗೂ ಕಬ್ಬಿನಿಂದ ಬೆಲ್ಲವನ್ನು ತಯಾರಿಸುತ್ತಿದ್ದು, ಹಾಗಾಗಿ ಈ ಪ್ರದೇಶಗಳಲ್ಲಿ ಹಾಗೂ ಮಂಡ್ಯದ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಆಲೆಮನೆಗಳಲ್ಲಿ ಹೆಚ್ಚಾಗಿ ನಿರ್ಮಿಸಿಕೊಂಡಿದ್ದರು ಎಂದು ಬುಕಾನನ್ ಹೇಳಿದ್ದಾನೆ. ಇಲ್ಲಿ ಅನೇಕ ಆಲೆಮನೆಗಳಲ್ಲಿ ಬೆಲ್ಲದ ಜೊತೆಗೆ ಎಳ್ಳು ಸೇರಿಸಿ ಸಿಹಿ ಖಾದ್ಯದ ಪದಾರ್ಥಗಳನ್ನು ತಯಾರಿಸುತ್ತಿದ್ದರೆಂಬ ಬಗ್ಗೆಯೂ ದಾಖಲಿಸಿದ್ದಾನೆ. ಹೈದರನು ಬೆಲ್ಲದ ಅಭಿವೃದ್ಧಿಗೋಸ್ಕರ ಆರ್ಕಾಟಿನಿಂದ ಮುಸ್ರಾಫ್ ಅಲಿಖಾನನಿಂದ 'ಪಟ್ಟಾಪಟ್ಟಿ' ಎನ್ನುವ ಬೆಲ್ಲವನ್ನು ಪರಿಚಯಿಸಿ ಬೆಲ್ಲದ ತಯಾರಿಕೆಯನ್ನು ಅಭಿವೃದ್ಧಿಪಡಿಸಿದ್ದನು. ಆದರೆ ಟಿಪ್ಪು ಇಸ್ಲಾಂ ಧರ್ಮಯನಾಗಿದ್ದು, ಮಾದಕ ದ್ರವ್ಯವನ್ನು ನೀಡುತ್ತಿದ್ದ ತಾಳೆಮರಗಳನ್ನು ಕಡಿಯಲು ಆಜ್ಞೆ ಮಾಡಿದ್ದನು. ಟಿಪ್ಪು ಕಬ್ಬು, ಬೆಲ್ಲಕ್ಕೆ ಪ್ರೋತ್ಸಾಹ ನೀಡಿದ್ದನು.[21]

ಮಲೆನಾಡಿನ ಪ್ರದೇಶಗಳಾದ ಇಕ್ಕೇರಿ, ಕವಲೆದುರ್ಗ, ಬಿದನೂರು (ನಗರ) ಮೊದಲಾದ ಪ್ರದೇಶಗಳಲ್ಲಿ ಬೆಲ್ಲವನ್ನು ತಯಾರಿಸಲಾಗುತ್ತಿತ್ತು. ಹಾಗೂ ತಯಾರಿಸುವ ವಿಧಾನವನ್ನು ಬುಕಾನನ್ ವಿವರಿಸಿದ್ದಾನೆ. "1400 ಕಬ್ಬುಗಳಿಂದ ಒಂದು ಮಣ ಬೆಲ್ಲವನ್ನು ತೆಗೆಯಬಹುದಾಗಿತ್ತು. ಕಬ್ಬಿಣಗಾಣ ಮೂರು ಸಿಲೆಂಡರ್‌ಗಳಿರುವ ಜೋಡಿಸಲ್ಪಟ್ಟಿದೆ. ಕಬ್ಬಿಣದ ಅಗಲವಾದ ಪಾತ್ರೆಯಲ್ಲಿ ಕುದಿಸಿ ಬೆಲ್ಲ ತಯಾರಿಸಲಾಗುತ್ತಿತ್ತು. ಬೆಲ್ಲ ಅಚ್ಚುಗಳಲ್ಲಿ ತಯಾರಿಸುತ್ತಿದ್ದು ಮಾರುಕಟ್ಟೆಯಲ್ಲಿ ಮಾರಲಾಗುತ್ತಿತ್ತು. ಇಕ್ಕೇರಿ, ಕವಿಲೆದುರ್ಗ, ಬಿದನೂರು, ಮದ್ದೂರು, ಮಂಡ್ಯ ಪ್ರದೇಶಗಳಲ್ಲದೆ, ಶಿಡ್ಲಘಟ್ಟ ಹಾಗೂ ಗುಡಿಬಂಡೆಯಲ್ಲಿಯೂ ಸಹ ಬೆಲ್ಲ ತಯಾರಿಸಲಾಗುತ್ತಿತ್ತು."[22]

ಮಂಡ್ಯ ಜಿಲ್ಲೆ 18ನೆಯ ಶತಮಾನದಲ್ಲಿಯೇ ಬೆಲ್ಲ ತಯಾರಿಕೆಗೆ ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು. ಆ ಕಾಲದಲ್ಲಿ ಬೆಲ್ಲವನ್ನು ತಯಾರಿಸುವ ವಿಧಾನವು ಅವೈಜ್ಞಾನಿಕವಾಗಿತ್ತು. ಮರದ ಗಾಣವನ್ನು ಬಳಸುತ್ತಿದ್ದರು. ಹಾಗೂ 50% ಹಾಗೂ 60% ರಷ್ಟು ಕಬ್ಬಿನ ರಸವನ್ನು ಹಿಂಡಿ ಉಳಿದ ರಸವು ಕಬ್ಬಿನ ಸಿಪ್ಪೆಯಲ್ಲೆ ಉಳಿದು ಬಿಡುತ್ತಿತ್ತು. ಸಂಗ್ರಹಿಸಿದ ರಸವನ್ನು ಮಣ್ಣಿನ ದೊಡ್ಡ ಮಡಕೆಗಳಲ್ಲಿ ಶೇಖರಿಸಿಕೊಂಡು ಕಬ್ಬಿಣದ ಪಾನ್‌ಗಳಲ್ಲಿ ಹಾಕಿ ಕಾಯಿಸಿದ ನಂತರ ಮರದಿಂದ ತಯಾರಿಸಿದ ಅಚ್ಚುಗಳಿಗೆ ಸುರಿಯುತ್ತಿದ್ದರು. ತಣ್ಣಗಾದ ಬಳಿಕ ಮರದ ಅಚ್ಚಿನಿಂದ ಬೆಲ್ಲವನ್ನು ತೆಗೆಯಲಾಗುತ್ತಿತ್ತು. ಆಗ ಬೆಲ್ಲದ ಅಚ್ಚು ಅಥವಾ ಬೆಲ್ಲದ ಉಂಡೆಗಳು ತಯಾರಾಗುತ್ತಿದ್ದವು. ಕಾಲನಂತರ ಸುಧಾರಣೆಯಾಗಿ ಇಂದು ಕಬ್ಬಿಣ ಗಾಣದ ಯಂತ್ರಗಳನ್ನು ಬಳಸಿ ಕಬ್ಬನ್ನು ಅರೆದು ಬೆಲ್ಲವನ್ನು ತಯಾರಿಸಲಾಗುತ್ತಿತ್ತು. ಹಾಗೆಯೇ ಶಿವಮೊಗ್ಗ ಜಿಲ್ಲೆ ಚನ್ನಗಿರಿ, ಹೊನ್ನಾಳಿ ಪ್ರದೇಶಗಳಲ್ಲಿಯೂ ಈ ರೀತಿಯ ಆಲೆಮನೆಗಳು ಕಂಡು ಬಂದಿವೆ.

### 2.8 ಸಕ್ಕರೆ ಮತ್ತು ಕಲ್ಲು ಸಕ್ಕರೆ ಕೈಗಾರಿಕೆ:

ಟಿಪ್ಪುಸುಲ್ತಾನ್ ಸಕ್ಕರೆ ಕೈಗಾರಿಕೆಯನ್ನು ಅಭಿವೃದ್ಧಿ ಪಡಿಸಲು ಉತ್ತಮ ಪ್ರಯತ್ನ ನಡೆಸಿ ಚೀನಾ ದೇಶದಿಂದ ಸಕ್ಕರೆಯನ್ನು ತಯಾರಿಸುವ ನುರಿತ ತಜ್ಞರನ್ನು ಕರೆಸಿದ್ದನು. ಸಕ್ಕರೆ ಮತ್ತು ಕಲ್ಲು ಸಕ್ಕರೆಯನ್ನು ತಯಾರಿಸುವ ವಿಧಾನವನ್ನು ರಹಸ್ಯವಾಗಿರಿಸಿದ್ದನು. ಚಿಕ್ಕಬಳ್ಳಾಪುರದಲ್ಲಿ ತಯಾರಿಸುವಂತಹ ಕಲ್ಲುಸಕ್ಕರೆಯು ತುಂಬಾ ಸಿಹಿಯನ್ನು ಒಳಗೊಂಡು ಬಿಳಿಬಣ್ಣದಿಂದ ಕೂಡಿತ್ತು. ಇಲ್ಲಿನ ಕಲ್ಲುಸಕ್ಕರೆಯು ಚೀನಾದ ಕಲ್ಲು ಸಕ್ಕರೆಗೆ ಸಮವಾಗಿತ್ತು. ಸಕ್ಕರೆಯನ್ನು ತಯಾರಿಸಲು ಕಡಿಮೆ ಉಷ್ಣಾಂಶದಿಂದ ಕುದಿಸಿದ ಕಬ್ಬಿನ ರಸವನ್ನು ರೈತರಿಂದ ಕೊಳ್ಳುತ್ತಿದ್ದರು. ಸಕ್ಕರೆ ಮತ್ತು ಕಲ್ಲುಸಕ್ಕರೆಯನ್ನು ಚನ್ನಪಟ್ಟಣ, ದೇವನಹಳ್ಳಿ ಪ್ರದೇಶಗಳಲ್ಲಿಯೂ ಸಹ ತಯಾರಿಸಲಾಗುತ್ತಿತ್ತು.[23] ಆದರೆ ರಾಜ್ಯಗಳಲ್ಲಿ ಕಲ್ಲು ಸಕ್ಕರೆಯು ಕಡಿಮೆ ಬೆಲೆಯುಳ್ಳದಾಗಿತ್ತು. ಚಿಕ್ಕಬಳ್ಳಾಪುರದಲ್ಲಾದ ಕಲ್ಲುಸಕ್ಕರೆ 10 ರೂಪಾಯಿಗೆ (2 ಪೌಂಡುಗಳಿಗೆ) ಒಂದು ಮಣದಂತೆ ಮಾರಾಟ

ಮಾಡಲಾಗುತ್ತಿತ್ತು. ಇಲ್ಲಿ ಮೃದುವಾದ ಕಬ್ಬಿನ ಸಕ್ಕರೆಯನ್ನು ತಯಾರಿಸುತ್ತಿತ್ತು. ಇದರ ಬೆಲೆ ಒಂದು ಮಣಕ್ಕೆ 3 ರೂಪಾಯಿಯಿಂದ 5 ರೂಪಾಯಿಗಳಾಗಿತ್ತು. ಚಿಕ್ಕಬಳ್ಳಾಪುರದಲ್ಲಿ ಅಷ್ಟೇ ಅಲ್ಲದೆ ಗುಡಿಬಂಡೆ ಹಾಗೂ ಶಿಡ್ಲಘಟ್ಟ ಪ್ರದೇಶವು ಸಹ ಕಲ್ಲು ಸಕ್ಕರೆಗೆ ಹೆಸರುವಾಸಿಯಾಗಿತ್ತು. ಹಾಗೆಯೇ ಶಿವಮೊಗ್ಗ ಜಿಲ್ಲೆ ಚನ್ನಗಿರಿ, ಹೊನ್ನಾಳಿ ಪ್ರದೇಶಗಳಲ್ಲಿಯೂ ಈ ರೀತಿಯ ಕೈಗಾರಿಕೆಗಳು ಕಂಡು ಬಂದಿದೆ.

**2.9 ಕಲ್ಲುಗಾರಿಕೆ:**

ಮಂಡ್ಯದ ಮೇಲುಕೋಟೆ ಹಾಗೂ ಶ್ರೀರಂಗಪಟ್ಟಣ ಮತ್ತು ನಾಗಮಂಗಲದ ಸುತ್ತ ಮುತ್ತಲಿನ ಪ್ರದೇಶದಲ್ಲಿ ವಿವಿಧ ಕಲ್ಲುಗಳು ದೊರೆಯುತ್ತಿದ್ದವು. ಇವುಗಳನ್ನು ಆ ಕಾಲದ ಶಿಲ್ಪಿಗಳು, ದೇವಾಲಯದ ಕಂಬಗಳಿಗೆ, ತೊಲೆಗಳಿಗೆ, ಕೋಟೆಗಳನ್ನು ಕಟ್ಟಲು, ಶಿಲ್ಪಕಲೆಗಳಿಗೆ ಬಳಸುತ್ತಿದ್ದರು. ಕೊಪ್ಪಳದ ಬಳಿ ದೊರೆಯುತ್ತಿದ್ದ ಕಲ್ಲು ಉತ್ತಮ ಗುಣಮಟ್ಟದಿಂದ ಕೂಡಿದ್ದು ಫೆಲ್ಸ ಚಾರ್, ಮೈಕಾಗ್ರಾನೈಟ್, ಬೈಲ್‌ಗಳಲ್ಲಿ ಸ್ಲೇಟು ಕಲ್ಲಿನ ನಿಕ್ಷೇಪ ದೊರೆಯುತ್ತಿತ್ತು. ಹೈದರ್ ಮತ್ತು ಟಿಪ್ಪು ಕಾಲದ ಶಿಲ್ಪಿಗಳು ತಮ್ಮ ವೃತ್ತಿಯಿಂದ 40–50 ಪಣಂಗಳನ್ನು ಕೆಲಸದಿಂದ ಗಳಿಸುತ್ತಿದ್ದರು. ಶಿಲ್ಪಿಗಳು ಕಲ್ಲುಗಳನ್ನು ಕತ್ತರಿಸಿ ಅವುಗಳಿಗೆ ಉತ್ತಮ ಆಕಾರ ಕೊಡುತ್ತಿದ್ದರು. ಉದಾ: ಶ್ರೀರಂಗಪಟ್ಟಣದಲ್ಲಿರುವ ಗುಂಬಜ್‌ನ ಕಪ್ಪು ಬಣ್ಣದ ಕಲ್ಲಿನ ಕಂಬಗಳನ್ನು ಸುಂದರವಾಗಿ ಕೆತ್ತಲಾಗಿದೆ. ಹಾಗೂ ಟಿಪ್ಪು ಸಂಬಂಧಿಕರ ಶವದ ಗೋರಿಗಳು ಆ ಕಾಲದ ಶಿಲ್ಪಿಗಳ ಕೌಶಲ್ಯಕ್ಕೆ ಸಾಕ್ಷಿಯಾಗಿವೆ.[24]

**2.10 ಚಿನ್ನ ಮತ್ತು ಬೆಳ್ಳಿ ವಸ್ತುಗಳ ತಯಾರಿಕೆ :**

ಮೈಸೂರು ಸಂಸ್ಥಾನದಲ್ಲಿ ಚಿನಿವಾರರು ಚಿನ್ನ ಮತ್ತು ಬೆಳ್ಳಿಯ ಆಭರಣಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಕೆಲವು ಖಾಸಗಿ ವ್ಯಕ್ತಿಗಳು ತಮಗೆ ಬೇಕಾದ ಆಭರಣಗಳನ್ನು ಮಾಡಿಸುತ್ತಿದ್ದರು.[25] ಗ್ರಾಮಗಳಲ್ಲಿದ್ದ ಚಿನಿವಾರರು ಸಾಮಾನ್ಯವಾಗಿ ಒಬ್ಬರೇ ಕೆಲಸವನ್ನು ಮಾಡುತ್ತಿದ್ದರು. ಆದರೂ ಸಂಬಂಧಿಕರನ್ನು ಅಧೀನ ಕುಶಲಕರ್ಮಿಗಳನ್ನಾಗಿ ಸೇರಿಸಿಕೊಂಡು ಅವರಿಗೆ ಶಿಕ್ಷಣವನ್ನು ಕೊಡುತ್ತಿದ್ದರು. ಸಾಮಾನ್ಯ ಗ್ರಾಮಗಳಲ್ಲಿದ್ದ ಚಿನಿವಾರರು ಸರಳವಾದ ಆಭರಣಗಳನ್ನು ತಯಾರಿಸಿದರೆ, ಪ್ರಮುಖ ಪಟ್ಟಣದ ಪ್ರದೇಶಗಳಲ್ಲಿ ಚಿನಿವಾರರು ವಿವಿಧ ಆಕಾರದ ಉತ್ತಮ ಆಭರಣಗಳನ್ನು ತಯಾರಿಸುತ್ತಿದ್ದರು.

ಚೀನಿವಾರರು ಚಿನ್ನ ಮತ್ತು ಬೆಳ್ಳಿ ವಸ್ತುಗಳನ್ನು ತಯಾರಿಸಲು ಸುತ್ತಿಗೆ ಚಿಮುಟ, ಮುದ್ರೆ, ಊದುಕೊಳವೆ, ಚಿನ್ನ ಕರಗಿಸುವ ಮೂಸೆ, ಕತ್ತರಿ, ತಕ್ಕಡಿ, ಬ್ರಷ್ ಮೊದಲಾದ ಉಪಕರಣಗಳನ್ನು ಬಳಸಿಕೊಳ್ಳುತ್ತಿದ್ದರು. ಈ ಉಪಕರಣಗಳು ಕಬ್ಬಿಣ ಮತ್ತು ಉಕ್ಕು ಅಥವಾ ಮಿಶ್ರಲೋಹದಿಂದ ತಯಾರಿಸುತ್ತಿದ್ದರು. ಚಿನಿವಾರರು ಕೆಂಪುಮಣ್ಣು, ಉಪ್ಪು, ಸಾಲ್ಟ್‌ಪೀಟರ್, ಹಾಲುಮ್ ಸಲ್ಫ್ಯೂರಿಕ್ ಹಾಗೂ ನೈಟ್ರಿಕ್

ಆ್ಯಸಿಡ್ ಮತ್ತು ಬೊರಾಕ್ಸ್ ಅವರ ಕಸುಬಿನ ವಸ್ತುಗಳಾಗಿವೆ. ಅಷ್ಟೆ ಅಲ್ಲದೆ ಮುಖ್ಯವಾಗಿ ಬೆಂಕಿ, ಇದ್ದಿಲು, ಸಗಣಿ ಮತ್ತು ಮರ ಬೇಕಾಗಿರುತ್ತವೆ. ಚಿನ್ನ ಮತ್ತು ಬೆಳ್ಳಿಯನ್ನು ಪರೀಕ್ಷಿಸಲು ಒಂದು ರೀತಿಯ ಕಪ್ಪು ಕಲ್ಲಿಗೆ ಒರೆ ಹಚ್ಚಿ ಚಿನ್ನದ ಉತ್ಕೃಷ್ಟತೆಯನ್ನು ಗುರುತಿಸುತ್ತಿದ್ದರು. ಚಿನ್ನವನ್ನು ಶುದ್ಧಗೊಳಿಸಲು ನುಣ್ಣಗಿನ ಇಟ್ಟಿಗೆಪುಡಿ, ಉಪ್ಪು, ಸಗಣಿಯನ್ನು ಬಳಸಿ ಬೆಂಕಿಯಲ್ಲಿ ಇಟ್ಟು ಕರಗಿಸುತ್ತಿದ್ದರು. ಅದಕ್ಕೆ ಸೇರ್ಪಡೆಗೊಂಡಿದ್ದ ಬಣ್ಣವನ್ನು ತೆಗೆದಾಗ ಶುದ್ಧ ಚಿನ್ನ ದೊರೆಯುತ್ತಿತ್ತು. ಶ್ರೀಮಂತರು ಚಿನ್ನದ ಆಭರಣಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಜನರು ಕಂಕಣ, ಅಡ್ಡಿಕೆ, ಓಲೆ, ಬಾವಲಿ, ಡಾಬು, ತಾಯಿತ, ಉಡುದಾರ, ಕಾಲುಗೆಜ್ಜೆ, ಬಾಜುಬಂದಿ, ಪದಕ ಮುಂತಾದ ಆಭರಣಗಳನ್ನು ತಯಾರಿಸುತ್ತಿದರು.[26] ಅಷ್ಟೆ ಅಲ್ಲದೆ ಬೆಂಗಳೂರಿನಲ್ಲಿ ಚಿನ್ನ ಮತ್ತು ಬೆಳ್ಳಿದಾರಗಳನ್ನು ಬಟ್ಟೆಗಳ ಅಲಂಕಾರಕ್ಕಾಗಿ ತಯಾರಿಸುತ್ತಿದ್ದರು. ಬಟ್ಟಲುಗಳು, ತಟ್ಟೆಗಳು, ಪಾತ್ರೆಗಳು, ದೇವರ ಪ್ರತಿಮೆಗಳು, ದೇವಸ್ಥಾನಗಳಿಗೆ ಆರತಿ ಬಟ್ಟಲುಗಳು, ಚಿನ್ನದ ಆಭರಣಗಳನ್ನು ತಯಾರಿಸಿಕೊಡುತ್ತಿದ್ದರು.

**ಕೊನೆ ಟಿಪ್ಪಣಿಗಳು**

---

[1] ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್', ಸಂ.–1, 1870, ಪು.180.

[2] ಲತಾ, ಪಿ., 'ಚನ್ನಪಟ್ಟಣದ ಕರಕುಶಲತೆಯ ಉದ್ಯಮ ಒಂದು ಅಧ್ಯಯನ', ಎಂ.ಫಿಲ್. ನಿಬಂಧ, 2011–12, ಪು.25.

[3] ರಮಾ, ಕೆ.ಎಸ್., 'ಮೈಸೂರು ಹುಲಿ ಟಿಪ್ಪುಸುಲ್ತಾನ್ ಜೀವನ ಚರಿತ್ರೆ ಮಾಲೆ–12', 2000, ಪು.63.

[4] ಸಾಂಬಮೂರ್ತಿ, 'ನೇಕಾರ ವೃತ್ತಿ ಪದಕೋಶ', ಕರ್ನಾಟಕ ವೃತ್ತಪದ ಮಂಜರಿ–3, 2000, ಪು.3.

[5] ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್', ಸಂ.–1, 1870, ಪು.152.

[6] ಹಯವದನರಾವ್, ಸಿ., ಮೈಸೂರು ಗ್ಯಾಸೆಟಿಯರ್, ಸಂ.–3, 1929, ಪು.239–240.

[7] ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.40.

[8] ಹಯವದನರಾವ್, ಸಿ., ಮೈಸೂರು ಗ್ಯಾಸೆಟಿಯರ್, ಸಂ.–3, 1929, ಪು.243.

[9] ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.14.

[10] ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್', ಸಂ.–1, 1870, ಪು.180.

[11] ನೀಲಾ ಮಂಜುನಾಥ್ (ಮು.ಸಂ.), 'ಕರ್ನಾಟಕ ಕೈಪಿಡಿ', 2012, ಪು.303.

[12] ಷೇಕ್ ಅಲಿ, ಬಿ., 'ಕರ್ನಾಟಕ ಚರಿತ್ರೆ', ಸಂ.5, 1997, ಪು.400.

[13] ನಾಗರಾಜ್, ಎಂ.ಜಿ. ಮತ್ತು ಕೃಷ್ಣಮೂರ್ತಿ, ಪಿ.ವಿ., 'ಇತಿಹಾಸ ದರ್ಶನ', ಸಂ.12, 1997, ಪು.124–125.

[14] ಗೋಪಾಲ್, ಆರ್., 'The Tipu Sultan the Tiger of Mysore', ಪು.371.

[15] ಗೋಪಾಲ್, ಆರ್., 'ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.451.

[16] ಗೋಪಾಲ್, ಆರ್., 'The Tipu Sultan the Tiger of Mysore', ಪು.390.

[17] ಗೋಪಾಲ್, ಆರ್. (ಸಂ.), 'ಚಿತ್ರದುರ್ಗ ಇತಿಹಾಸ ಮತ್ತು ಪುರಾತತ್ವ', 2005, ಪು.264.

[18] ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್', ಸಂ.–1, 1870, ಪು.170.

[19] ಅದೇ, ಪು.301.

[20] ನಾಗರಾಜ್, ಎಂ.ಜಿ. ಮತ್ತು ಕೃಷ್ಣಮೂರ್ತಿ, ಪಿ.ವಿ., 'ಇತಿಹಾಸ ದರ್ಶನ', ಸಂ.12, 1997, ಪು.124–125.

[21] ಗೋಪಾಲ್, ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.335–336.

[22] ಗೋಪಾಲ್, ಆರ್. (ಸಂ.), 'ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.404.

[23] ಸೂರ್ಯನಾಥ ಯು. ಕಾಮತ್ (ಮು.ಸಂ.), ಕರ್ನಾಟಕ ಗ್ಯಾಸೆಟಿಯರ್, ಸಂ.–1, 1984, ಪು.259.

[24] ಗೋಪಾಲ್, ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.340–341.

[25] ಹಯವದನರಾವ್, ಸಿ., ಮೈಸೂರು ಗ್ಯಾಸೆಟಿಯರ್, ಸಂ.–3, 1929, ಪು.246.

[26] ರೈಸ್, ಬಿ.ಎಲ್., ಮೈಸೂರು ಗ್ಯಾಸೆಟಿಯರ್, ಸಂ.–1, 1907, ಪು.529.

## ಅಧ್ಯಾಯ–3

# ಕೈಗಾರಿಕಾ ಬೆಳವಣಿಗೆ

## (ಸಣ್ಣ ಪ್ರಮಾಣದ ಕೈಗಾರಿಕೆಗಳು)

ನೈಸರ್ಗಿಕವಾಗಿ ಸಿಗುವ ಸಂಪನ್ಮೂಲ ಹಾಗೂ ಭೂಮಿಯಿಂದ ದೊರೆಯುವ ಖನಿಜ ಕಚ್ಚಾ ಸಂಪನ್ಮೂಲಗಳನ್ನು ಬಳಸಿಕೊಂಡು ಅವುಗಳಿಗೆ ಕಡಿಮೆ ಬಂಡವಾಳವನ್ನು ಹೂಡಿ ಸಿದ್ಧವಸ್ತುಗಳಾಗಿ ಮಾನವ ಜೀವನಕ್ಕೆ ಸಾಮಾನ್ಯವಾಗಿ ಅಗತ್ಯವಾಗುವಂತಹ ವಸ್ತುಗಳನ್ನು ಕಡಿಮೆ ಮಾನವ ಸಂಪನ್ಮೂಲಗಳ ಬಳಕೆಯಿಂದ ಗೃಹಗಳಲ್ಲೆ ಸಿದ್ಧವಸ್ತುಗಳನ್ನಾಗಿ ತಯಾರಿಸುವಂತಹ ವಸ್ತುಗಳನ್ನು ಗುಡಿ ಕೈಗಾರಿಕೆಗಳು ಎನ್ನುತ್ತೇವೆ. ಉದಾಹರಣೆಗೆ : ಬಳೆ, ಬಿದಿರುವಸ್ತುಗಳು, ಮಣ್ಣಿನಿಂದ ತಯಾರಿಸಿದ ವಸ್ತುಗಳಾದ ಮಡಿಕೆ, ದೇವರ ವಿಗ್ರಹ ಇತ್ಯಾದಿ. ಬಣ್ಣ, ಮರದ ಗೃಹಪಯೋಗಿ ವಸ್ತುಗಳು ಮುಂತಾದವುಗಳು ಗುಡಿ ಕೈಗಾರಿಕಾ ವಸ್ತುಗಳಾಗಿವೆ.

ಒಡೆಯರ ಕಾಲದಿಂದಲೇ ಗುಡಿ ಕೈಗಾರಿಕೆಗಳು ಅಸ್ತಿತ್ವದಲ್ಲಿ ಇರುವುದು ಕಂಡುಬಂದಿವೆ. ಹಾಗೆಯೇ ಮೈಸೂರು ಸಂಸ್ಥಾನಕ್ಕೆ ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿಯೂ ಸಹ ಗೃಹ ಕೈಗಾರಿಕೆಗಳು ಕಂಡುಬಂದಿದ್ದು ಮಡಿಕೆ, ಬಿದಿರು, ಬುಟ್ಟಿ, ಬಣ್ಣ, ಬಳೆ, ಚಾಪೆ ಮುಂತಾದ ವಸ್ತುಗಳನ್ನು ತಯಾರಿಸುತ್ತಿದ್ದರು. ಗುಡಿ ಕೈಗಾರಿಕೆಗಳು ತಯಾರಿಕಾ ವಸ್ತುಗಳನ್ನು ಕೆಲವು ವೃತ್ತಿಪರ ವರ್ಗಗಳಾದ ಕುಂಬಾರರು, ಬಡಗಿಗಳು ಮುಂತಾದ ವರ್ಗಗಳು ತಯಾರಿಸುತ್ತಿದ್ದರು. ಇದರಿಂದ ತಯಾರಾದ ವಸ್ತುಗಳು ಸ್ಥಳೀಯ ವ್ಯಾಪಾರ ಚಟುವಟಿಕೆಗಳಲ್ಲಿ ಪ್ರಧಾನವಾಗಿದ್ದವು.

### 3.1 ಚೌಕಕಾರದ ಕುಲುಮೆ:

ಬುಕಾನನ್ ತಿಳಿಸಿರುವಂತೆ "ಚೌಕಾಕಾರದ ಕುಲುಮೆಯ ಎತ್ತರವು 244 ಸೆಂ.ಮೀ. ರಿಂದ 304 ಸೆಂ.ಮೀ.ಗಳಷ್ಟು ಎತ್ತರವಾಗಿದ್ದು, ತಳಭಾಗದಲ್ಲಿ ಒಂದು ಬಾಹು 45 ರಿಂದ 75 ಸೆಂ.ಮೀ. ಉದ್ದವಿದ್ದು ಹಾಗೂ ತಳಭಾಗದಲ್ಲಿ ರಂಧ್ರಗಳುಳ್ಳ ಅಗಲವಾದ ಜಗತಿಯನ್ನು ಒಳಗೊಂಡಿತ್ತು. ಇಲ್ಲಿ ಪ್ರತಿಬಾರಿಯೂ ಕಬ್ಬಿಣವನ್ನು ಕರಗಿಸಿ ಉತ್ಪಾದನೆ ಮಾಡಿ ಪಡೆಯುವಾಗ ಅದರ ಮುಂದೆ ಇದ್ದ ಗೋಡೆಯನ್ನು ಪ್ರತೀ ಬಾರಿ ತೆಗೆದು ಹಾಕಿ ಪುನಃ ನಿರ್ಮಿಸುತ್ತಿದ್ದರು. ಇಲ್ಲಿ ದೊರೆತ ಮೆದು ಕಬ್ಬಿಣ ಲೋಹವನ್ನು ಕಬ್ಬಿಣ ಬಡಿಯುವ ಕುಲುಮೆಯಲ್ಲಿ ನಿರ್ದಿಷ್ಟವಾದಂತಹ ರೀತಿಯಲ್ಲಿ ಶುದ್ದೀಕರಣವನ್ನು ಮಾಡಿಕೊಳ್ಳುತ್ತಿದ್ದರು."[1]

ಮಂಗಳೂರಿನಲ್ಲಿ ಒಂದು ದೊಡ್ಡ ಸರಕಾರಿ ಕಬ್ಬಿಣ ತಯಾರಿಸುವ ಘಟಕವು ಇತ್ತು. ಹಾಗೆಯೇ ಶ್ರೀರಂಗಪಟ್ಟಣದಲ್ಲಿ ಅತ್ಯುತ್ತಮವಾದ ಕಬ್ಬಿಣ ತಯಾರಿಕಾ

ಕಾರ್ಖಾನೆಯು ಇದ್ದು ಇದು ಯೂರೋಪಿನಲ್ಲಿ ತಯಾರಾಗುತ್ತಿದ್ದ ಕಬ್ಬಿಣದ ವಸ್ತುಗಳಿಗೆ ಸಮ ಎಂದು ಸಮಕಾಲೀನ ಇತಿಹಾಸಕಾರನಾದ ಕೀರ್ಮಾನಿಯು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಅದೇ ರೀತಿ ಬೆಂಗಳೂರು, ಬಿದನೂರು, ಚಿತ್ರದುರ್ಗ, ಧಾರವಾಡದ ಸಮೀಪವಿರುವ ತೇಗೂರು, ಮಂಡ್ಯ ಜಿಲ್ಲೆ ಹಲಗೂರು, ಬೆಂಕಿಪುರ (ಈಗಿನ ಭದ್ರಾವತಿ) ಮೊದಲಾದ ಸ್ಥಳಗಳಲ್ಲಿ ಕಬ್ಬಿಣ ತಯಾರಿಸುವ ಪ್ರಮುಖ ಘಟಕಗಳಿದ್ದವು. ಹಾಗೆಯೇ ಚನ್ನರಾಯದುರ್ಗ, ಮಧುಗಿರಿ, ದೇವರಾಯನದುರ್ಗ ಮತ್ತು ಹಾಗಲವಾಡಿಗಳಲ್ಲಿ ಮಳೆಗಾಲದ ಸಮಯದಲ್ಲಿ ಮರಳಿನಿಂದ ಕಬ್ಬಿಣವನ್ನು ಸಂಗ್ರಹಿಸಿ ತಯಾರಿಸಲಾಗುತ್ತಿತ್ತು. ಇವು ಋತು ಮಾಸಿಕ ಕೈಗಾರಿಕೆಯಾಗಿದ್ದವು  ಎಂದು ಬುಕಾನನ್ ಹೇಳಿದ್ದಾನೆ. ಈ ಘಟಕಗಳಲ್ಲಿ ಹೇಗೆ ಕಬ್ಬಿಣದ ಅದಿರನ್ನು ಕರಗಿಸಲಾಗುತ್ತಿತ್ತು ಎಂಬುದನ್ನು ಕುರಿತು ಅದರ ತಾಂತ್ರಿಕ ವಿವರಗಳನ್ನು ವಿವರಿಸಿದ್ದಾನೆ. ಅದರಲ್ಲೂ ಮಾಗಡಿ ತಾಲ್ಲೂಕಿನ ಗಟ್ಟಿಪುರದಲ್ಲಿದ್ದ ಕಬ್ಬಿಣ ಅದಿರಿನ ಬಗ್ಗೆ ಮಾಹಿತಿ ನೀಡಿದ್ದು, ಈ ಪ್ರದೇಶಗಳಲ್ಲಿ ಕಲ್ಲು ಬಡಿಯುವ ಉಳಿಗಳನ್ನು ಹಾಗೂ ಖಡ್ಗದ ಅಲಗುಗಳನ್ನು ತಯಾರಿಸುವ ಜೊತೆಗೆ ಉಕ್ಕು ತಯಾರಿಕೆಯನ್ನು  ಸಹ ಮಾಡಲಾಗುತ್ತಿತ್ತೆಂದು ತಿಳಿಸಿದ್ದಾನೆ. ಮಾಗಡಿ, ಬೆಂಗಳೂರು, ಪ್ರದೇಶಗಳಲ್ಲಿ ತುಮಕೂರಿನ ತಿಪಟೂರು, ಕುಣಿಗಲ್, ಊರ್ಡಿಗೆರೆ, ಸೀತಕಲ್ಲು, ಹಾಸನ ಜಿಲ್ಲೆಯ ಶ್ರವಣಬೆಳಗೊಳ, ಶಿವಮೊಗ್ಗದ ಶಿಕಾರಿಪುರಗಳಲ್ಲಿ ಕಬ್ಬಿಣದ ಕೈಗಾರಿಕೆಗಳು ಸ್ಥಾಪಿತವಾಗಿದ್ದವು.

### 3.2 ಎಣ್ಣೆ ತಯಾರಿಕೆ:

ಪ್ರಾಚೀನ ಕಾಲದಿಂದ ಎಣ್ಣೆಬೀಜಗಳಿಂದ ಎಣ್ಣೆಯನ್ನು ಮೈಸೂರು ರಾಜ್ಯದ ಪ್ರದೇಶಗಳಲ್ಲಿ ತಯಾರಿಸುತ್ತಿದ್ದರು. ಎಣ್ಣೆಯನ್ನು ತಯಾರಿಸುತ್ತಿದ್ದವರನ್ನು ಗಾಣಿಗರು ಎಂದು ಕರೆಯಲಾಗಿದೆ. ಎಣ್ಣೆಯನ್ನು ಅಡುಗೆಗಾಗಿ ಹಾಗೂ ಮನೆ ಮತ್ತು ದೇವಾಲಯಗಳಲ್ಲಿ ದೀಪ ಉರಿಸುವುದಕೋಸ್ಕರ ತಯಾರಿಸುತ್ತಿದ್ದರು. ಗಾಣಿಗರನ್ನು ಹೆಗ್ಗಾಣಿಗರು ಎಂದೂ ಸಹ ಸಹ ಕರೆಯುತ್ತಿದ್ದರು ಹೆಗ್ಗಾಣಿಗರು ಎತ್ತುಗಳನ್ನು ಕಲ್ಲಿನ ಗಾಣಕ್ಕೆ ಕಟ್ಟಿ ಎಣ್ಣೆ ತೆಗೆಯುತ್ತಿದ್ದರು. ಹಾಗೆಯೇ ಕಿರುಗಾಣಿಗರು ಎಂಬ ಇನ್ನೊಂದು ವರ್ಗವಿತ್ತು. ಇವರು ಮರದ ಗಾಣದಲ್ಲಿ ಎಣ್ಣೆ ತೆಗೆಯುತ್ತಿದ್ದರು. ಈ ವರ್ಗದವರು ಮೈಸೂರು ರಾಜ್ಯದಲ್ಲಿ ಹೆಚ್ಚಾಗಿ ವಾಸವಾಗಿದ್ದರು. ಯಾರು ಒಂಟಿ ಎತ್ತನ್ನು ಬಳಸಿಕೊಂಡು ಎಣ್ಣೆಯನ್ನು ತೆಗೆಯತ್ತಿದ್ದರೊ ಅಂತಹವರಿಗೆ ಒಂಟೆತ್ತು ಗಾಣಿಗ ಎಂದು ಕರೆಯುತ್ತಿದ್ದರು. ಕೊಬ್ಬರಿ, ಅರಳು, ಹೊಂಗೆ, ಹುಲ್ಲೆಳ್ಳು, ಹುಚ್ಚೆಳ್ಳು, ಹರಳು, ಹಿಪ್ಪೆ ಬೀಜಗಳಿಂದ ಎಣ್ಣೆ ತೆಗೆಯುತ್ತಿದ್ದರು. ಬೆಂಗಳೂರಿನ ಎಲ್ಲಾ ಭಾಗಗಳಲ್ಲಿ ಚದುರಿದಂತೆ ಹಾಗೆಯೆ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ, ಮಂಡಿಕಲ್ ಮತ್ತು ಮೈಸೂರು ಜಲ್ಲೆಯ ವಿವಿಧ ಪ್ರದೇಶಗಳಲ್ಲಿ ಎಣ್ಣೆ ಗಾಣಗಳು ಇದ್ದವು.[2]

ಗಾಣಗಳಲ್ಲಿ ಪ್ರಮುಖವಾಗಿ ಎರಡು ವಿಧಗಳಿದ್ದವು ಅವುಗಳೆಂದರೆ, 1. ಮರಗಾಣ 2. ಕಲ್ಲುಗಾಣ, ಗಾಣಗಳನ್ನು ಎಳೆಯಲು 2 ಎತ್ತುಗಳನ್ನು ಬಳಸುತ್ತಿದ್ದರು. ಕಲ್ಲಿನ ಪಾತ್ರೆಯೊಂದನ್ನು ನೆಲದಿಂದ ಆರು ಅಡಿ ಒಂಬತ್ತು ಇಂಚು ಎತ್ತರದಲ್ಲಿ ಸ್ಥಾಪಿಸುತ್ತಿದ್ದರು. ಅದರ ಎತ್ತರಕ್ಕೆ ಒಂದು ಒನಕೆಯನ್ನು ಕಟ್ಟುತ್ತಿದ್ದರು ಒನಕೆಯನ್ನು ವೃತ್ತಾಕಾರದಲ್ಲಿ ಎತ್ತುಗಳ ಸಹಾಯದಿಂದ ತಿರುಗಿಸಿ ಕಲ್ಲಿನ ಪಾತ್ತೆಯಲ್ಲಿ ಎಣ್ಣೆಬೀಜ ಪುಡಿಯಾಗಿ ಎಣ್ಣೆ ತಯಾರಿಸಲಾಗುತ್ತಿತ್ತು.[3] ಬುಕಾನನ್ ಬೆಂಗಳೂರಿನಲ್ಲಿನ ಎಣ್ಣೆ ತಯಾರಿಕೆಯ ಬಗ್ಗೆ ಈ ರೀತಿ ತಿಳಿಸಿದ್ದಾನೆ. ಜೋಡಿಪಣ ಎಂಬ ಹೆಸರಿನವರು ಎತ್ತುಗಳಿಂದ ಅರೆಯುವ ಕಲ್ಲಿನ ಪಾತ್ರೆಯಿಂದ ಎಣ್ಣೆ ತೆಗೆಯುತ್ತಿದ್ದರು, ಎಣ್ಣೆ ತೆಗೆಯಲು ಹರಳು, ಕೊಬ್ಬರಿ, ಹುಚ್ಚಳ್ಳು, ಹುಲ್ಲೆಳ್ಳ, ಹೊಂಗೆಬೀಜ, ಹಿಪ್ಪೆಬೀಜಗಳನ್ನು 6 ಗಂಟೆಗಳ ಕಾಲ ಅರೆದು ಎಣ್ಣೆ ತೆಗೆಯುತ್ತಿದ್ದರು. ದಿನಕ್ಕೆ ಎರಡು ಬಾರಿ ಎಣ್ಣೆ ಕಾಳುಗಳನ್ನು ಅರೆಯುವ ಕೆಲಸದಲ್ಲಿ ತೊಡಗಿರುತ್ತಿದ್ದರು. ಎಣ್ಣೆಯನ್ನು ದೀಪ ಉರಿಸಲು ಮತ್ತು ಔಷಧಿಯಲ್ಲಿ ಹರಳಣ್ಣೆಯನ್ನು ಬಳಸುತ್ತಿದ್ದರು"[4] ಎಣ್ಣೆ ತಯಾರಿಕೆಯು ಹೆಚ್ಚಾಗಿ ಮಂಡ್ಯ ಜಿಲ್ಲೆಯ ಪಾಂಡವಪುರ, ತೊಣ್ಣೂರು ಪ್ರದೇಶಗಳಲ್ಲಿ ಹೆಚ್ಚಾಗಿದ್ದವು. ಗಾಣಿಗರು ಬಳಸುವ ಉಪಕರಣಗಳಿಂದರೆ, ಅಗಳಿ, ಬಳ್ಳ, ಒಡಿಕಲ್ಲು, ಕಾಳು, ಕುಸುಬಿಕಲ್ಲು, ಕುರ್ಪಿ ಚಂಡಕಿ ಚಟ್ಟ, ನಗ ತಟ, ಮಿಣೆ, ಸರಡಬ್ಬ, ಹಗ್ಗ, ಹಿಡಿಕೈ, ಸರಪಳಿ ಇನ್ನು ಮುಂತಾದವು.

### 3.3 ತಾಮ್ರ ಮತ್ತು ಹಿತ್ತಾಳೆ ವಸ್ತುಗಳು:

ಭೋಗಾರರೆಂಬ ಜನಾಂಗದವರು ತಾಮ್ರದ ಲೋಹದಿಂದ ಅಡಿಗೆ ಪಾತ್ರೆಗಳು, ಕುಡಿಯುವ ನೀರಿನ ಪಾತ್ರೆ, ಹಾಗೂ ಹಿತ್ತಾಳೆ ಲೋಹದಿಂದ ದೀಪದ ಕಂಬಗಳು, ದೇವರ ವಿಗ್ರಹಗಳು, ವಾದ್ಯಗಳನ್ನು ತಯಾರಿಸುತ್ತಿದ್ದರು. ಕೆಳ ಹಾಗೂ ಮದ್ಯಮವರ್ಗದ ಜನಾಂಗದವರು ಇವುಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಹಿಂದೂ ಮತ್ತು ಮುಸ್ಲಿಂ ಜನಾಂಗವು ತಾಮ್ರದ ವಸ್ತುಗಳನ್ನು ವಿವಿಧ ಸಂದರ್ಭಗಳಾದ ಮದುವೆ, ಹಬ್ಬಗಳಲ್ಲಿ ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಅಲ್ಲದೆ, ಮದುವೆ ಮೊದಲಾದ ಶುಭ-ಸಮಾರಂಭಗಳಲ್ಲಿ ಉಡುಗೊರೆಯಾಗಿ ತಾಮ್ರದ ವಸ್ತುಗಳನ್ನು ಕೊಡುತ್ತಿದ್ದರು. ಭೋಗಾರರು ಪಾತ್ರೆಗಳನ್ನು ತಯಾರಿಸುವಾಗ ಪಾತ್ರೆಯ ಆಕಾರಕ್ಕೆ ತಕ್ಕಂತೆ ಮಣ್ಣು ಮತ್ತು ಮೇಣದಿಂದ ಮಾದರಿಯನ್ನು ಸಿದ್ದಪಡಿಸಿಕೊಂಡ ನಂತರ ಕಾದ ಲೋಹವನ್ನು ಅದಕ್ಕೆ ಸುರಿದು ಪಾತ್ರೆಗಳನ್ನು ತಯಾರಿಸುತ್ತಿದ್ದರು. ಪಾತ್ರೆಯ ಹೊರಭಾಗ ಮತ್ತು ಒಳಭಾಗವನ್ನು ಇನ್ನೂ ಶುದ್ಧಿಕರಿಸುವುದ್ದಕ್ಕಾಗಿ ಪಾತ್ರೆಯಲ್ಲಿ ಉಳಿದ ಪಿಸುರುಗಳನ್ನು ಕೈಗಳ ಸಹಾಯದಿಂದ ಹತ್ತರಿ ಹೊಡೆದು ತೆಗೆಯುತ್ತಿದ್ದರು. ನಾಗಮಂಗಲ, ಮಾಗಡಿ, ಶ್ರವಣಬೆಳಗೊಳ, ಸೀತಕಲ್ಲುಗಳಲ್ಲಿ ತಾಮ್ರದ ಲೋಹದ ಹಾಳೆಗಳನ್ನು ಹಾಗೂ ಪಾತ್ರೆಗಳನ್ನು ತಯಾರಿಸುತ್ತಿದ್ದರು. ಹಾಳೆಗಳನ್ನು ತಯಾರಿಸುವಾಗ ಬಡಿಯುವ ಕ್ರಿಯೆ ನಡೆಯುತ್ತಿತ್ತು. ಹಳೆಯ

ಪಾತ್ರೆಗಳನ್ನು ಕರಗಿಸಿ ಮತ್ತೆ ಹೊಸ ಪಾತ್ರೆಗಳನ್ನು ತಯಾರಿಸುತ್ತಿದ್ದರು. ಒಟ್ಟಾರೆ ತಾಮ್ರ ಮತ್ತು ಹಿತ್ತಾಳೆ ಸಹಾಯದಿಂದ ಭೋಗಾರರು ಪಾತ್ರೆ, ದೇವರ ವಿಗ್ರಹ, ಲೋಟ, ತಟ್ಟೆ, ಪೆಟ್ಟಿಗೆ, ದೇವತೆಗಳ ವಾಹನ ಮುಂತಾದವುಗಳನ್ನು ತಯಾರಿಸುತ್ತಿದ್ದರು.[5]

### 3.4 ಗಾಜು ಮತ್ತು ಬಳೆ ತಯಾರಿಕೆ:

ಹೈದರ್ ಅಲಿ ಮತ್ತು ಟಿಪ್ಪು ಆಡಳಿತದ ಕಾಲದಲ್ಲಿ ಗಾಜು, ಬಳೆ, ಶೀಸೆ ತಯಾರಿಕೆಯ ಕೈಗಾರಿಕೆಗಳು ಅಸ್ಥಿತ್ವದಲ್ಲಿದ್ದವು. ಇವುಗಳನ್ನು ತಯಾರಿಸುವ ನಿಟ್ಟಿನಲ್ಲಿ ಆಧುನಿಕ ತಂತ್ರಜ್ಞಾನ ಕೌಶಲಗಳನ್ನು ಅಭಿವೃದ್ಧಿಪಡಿಸಿಲಾಗಿತ್ತು. ಗಾಜನ್ನು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗದ ಮತ್ತೋಡಿನಲ್ಲಿ ಸ್ಥಾಪಿಸಿದ್ದು, ಅಲ್ಲೆ ಬಳೆಗಳನ್ನು ತಯಾರಿಸಲಾಗುತ್ತಿತ್ತು. ಅಲ್ಲಿ ತಯಾರಿಸಲಾದ ಗಾಜು ಪಾರದರ್ಶಕ ಹಾಗೆಯೇ ಚನ್ನಪಟ್ಟಣದಲ್ಲಿಯೂ ಸಹ ಗಾಜಿನ ಬಳೆಗಳನ್ನು ಮತ್ತು ಸೀಸೆ ತಯಾರಿಸಲಾಗುತ್ತಿತ್ತು.

ಬುಕಾನನ್ ತನ್ನ ಪ್ರವಾಸ ಕಥನದಲ್ಲಿ ಹೊಸದುರ್ಗ ತಾಲ್ಲೂಕಿನ ಮುತ್ತೋಡಿನಲ್ಲಿದ್ದ ಗಾಜು ತಯಾರಿಕಾ ಘಟಕದಲ್ಲಿ ಹೇಗೆ ಗಾಜನ್ನು ಮತ್ತು ಬಳೆಗಳನ್ನು ತಯಾರಿಸಲಾಗುತ್ತಿತ್ತು ಎಂದು ಹೀಗೆ ವಿವರಿಸಿದ್ದಾನೆ. "ಮುತ್ತೋಡಿನಲ್ಲಿ ಗಾಜು ತಯಾರಿಕಗೆ ಬೇಕಾದ ಕಚ್ಚಾವಸ್ತುಗಳು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸಿಗುತ್ತಿತ್ತು. ಸವಳು ಮಣ್ಣನ್ನು ಬೇಸಿಗೆಯಲ್ಲಿ ಸಂಗ್ರಹಿಸಿ ಇಟ್ಟುಕೊಂಡು ನಂತರ ಈ ಸವಳು ಮಣ್ಣು ಮತ್ತು ಮರಳನ್ನು ಗೋವಿನ ಸಗಣಿಯೊಂದಿಗೆ ಪಳಿಕೆ ಚಾಕುಗಳಾಗಿ ಮಾಡಿ ಕಡಿಮೆ ಉದ್ದದ ನೆರಳಿನಲ್ಲಿ ಒಣಗಿಸಿ ಸುಡಲಾಗುತ್ತಿತ್ತು. ಆಗ ದೊರೆತ ಸೋಡಾವನ್ನು ಬೆಣಚಿನ ಪುಡಿಯೊಂದಿಗೆ ನಿರ್ದಿಷ್ಟವಾದ ರೀತಿಯಲ್ಲಿ ಮಿಶ್ರಣಗೊಳಿಸಿ ಚೆನ್ನಾಗಿ ಪುಡಿಮಾಡಿ ಅದರ ಜೊತಗೆ ವಿವಿಧ ಖನಿಜ ವಸ್ತುಗಳನ್ನು ವಿವಿಧ ಪ್ರಮಾಣದಲ್ಲಿ ಪುಡಿ ಮಾಡಿ ಬೆರೆಸಿ ಮೂಸೆಗಳಲ್ಲಿ ತುಂಬಿಸಿ ಕಾಯಿಸಿ. ವಿವಿಧ ಬಣ್ಣದ ಗಾಜನ್ನು ತಯಾರಿಸಲಾಗುತ್ತಿತ್ತು. ಈ ಗಾಜಿನೊಂದಿಗೆ ಸೋಡಾವನ್ನು ಮಿಶ್ರಣ ಮಾಡಿದಾಗ ಕಪ್ಪುಗಾಜು ತಯಾರಾಗುತ್ತಿತ್ತು. ಹಾಗೆಯೇ ತಾಮ್ರ ಮತ್ತು ಮ್ಯಾಂಗ್ನೀಸ್ ಪುಡಿಯನ್ನು ಗಾಜಿನೊಂದಿಗೆ ಮಿಶ್ರಣ ಮಾಡಿ ಕಾಯಿಸಿದಾಗ ಹಸಿರು ಬಣ್ಣದ ಗಾಜು ತಯಾರಾಗುತ್ತಿತ್ತು. ಕೆಮ್ಮಣ್ಣನ್ನು ಮಿಶ್ರಣಗೊಳಿಸಿದಾಗ ಕೆಂಪು ಗಾಜು, ತಾಮ್ರದ ಪುಡಿಯನ್ನು ಮಿಶ್ರಣಗೊಳಿಸಿದಾಗ ನೀಲಿ ಬಣ್ಣದ ಗಾಜು, ಹಳದಿ ಪುಡಿಯನ್ನು ಮಿಶ್ರಣಗೊಳಿಸಿ ಹಳದಿ ಬಣ್ಣದ ಗಾಜನ್ನು ತಯಾರಿಸಲಾಗುತ್ತಿತ್ತು. ಇಲ್ಲಿ ಮಿಶ್ರಣ ಮಾಡುವಾಗ ಒಂದು ನಿರ್ದಿಷ್ಟವಾದ ಪ್ರಮಾಣದಲ್ಲಿ ಬೆರೆಸಿ ಆ ನಂತರ ಮೂಸೆಗಳಲ್ಲಿ ತುಂಬಿ ಕುಲುಮೆ ಕಾಯಿಸಲಾಗುತ್ತಿತ್ತು. ಬೋಗಾರರೆಂಬ ಜೈನರು ಬಳೆಗಳನ್ನು ಮಾಡುತ್ತಿದ್ದರು. ಗಾಜನ್ನು ಕರಗಿಸುವ ಕುಲಮೆಗಳಲ್ಲಿ ಗಾಜಿಗೆ ಬಣ್ಣ ಹಾಕಲು ಆ ಕುಲುಮೆಗೆ ನಾಲ್ಕು ಮೂಲೆಗೆ ನಾಲ್ಕು ಮೂಸೆಗಳಿದ್ದವು. ಒಂದೊಂದು ಮೂಸೆಯ ಬಳಿ ವ್ಯಕ್ತಿಯೊಬ್ಬ ಕುಳಿತುಕೊಂಡು ಉದ್ದವಾದ ಕಬ್ಬಿಣದ ಸಲಾಕೆಯಿಂದ ಗಾಜಿಗೆ ಉಂಗುರ ರೂಪ ಕೊಡುತ್ತಾನೆ. ಬಳಿಕ ಅದನ್ನು ಒಂದು ದುಂಡಾಕೃತಿ ಹೊಂದಿರುವ

ಕಬ್ಬಿಣ ತುಂಡಿನ ಮೇಲೆ ಹಾಕಿ, ನಂತರ ಹಿಡಿಕೆಯಿಂದ ಅದನ್ನು ತಿರುಗಿಸುತ್ತಾ ಬೇಕಾದ ಗಾತ್ರಕ್ಕೆ ಬಳೆಯನ್ನು ಮಾಡಿ ಚೂರಿಯಿಂದ ಅದನ್ನು ತಿದ್ದಿದಾಗ ನಿರ್ದಿಷ್ಟವಾದ ಬಳೆ ರಚನೆಯಾಗುತ್ತಿತ್ತು.[6] ಚನ್ನಪಟ್ಟಣದಲ್ಲಿಯು ಸಹ ಗಾಜು ಮತ್ತು ಬಳೆಗಳನ್ನು ತಯಾರಿಸಲಾಗುತ್ತಿತ್ತು.[7] ಕೋಲಾರದ ಚಿಂತಾಮಣಿ ಹಾಗೂ ಜಿಲ್ಲೆಯ ಇತರಪಟ್ಟಣಗಳು ಚಿತ್ರದುರ್ಗದ ಮೊಳಕಾಲ್ಮೂರು ಸಹ ಗಾಜಿನ ತಯಾರಿಕೆಗೆ ಪ್ರಸಿದ್ದಿಯಾಗಿದ್ದವು.

### 3.5 ಸಂಗೀತ ವಾದ್ಯಗಳ ಬಿಡಿಭಾಗಗಳ ತಯಾರಿಕೆ:

ಬುಕಾನನ್ ಕ್ರಿ.ಶ. 1800ರ ಜೂನ್ ತಿಂಗಳಿನಲ್ಲಿ ಚನ್ನಪಟ್ಟಣಕ್ಕೆ ಭೇಟಿ ನೀಡಿದಾಗ ಚನ್ನಪಟ್ಟಣದಲ್ಲಿ ಕರಕುಶಲತೆ ಸಂಬಂಧಿಸಿದ ವೀಣೆಗೆ ಹಾಕುವ ಉಕ್ಕಿನತಂತಿಯನ್ನು ತಯಾರಿಸಲಾಗುತ್ತಿದ್ದರ ಬಗ್ಗೆ ಉಲ್ಲೇಖ ನೀಡಿದ್ದಾರೆ. ಸಂಗೀತ ವಾದ್ಯಗಳಲ್ಲಿ ಒಂದಾದ ವೀಣೆಯ ತಂತಿಯ ತಯಾರಿಕೆಯು ಚನ್ನಪಟ್ಟಣದಲ್ಲಿ ತಯಾರಿಸಲಾಗುತ್ತಿತ್ತು. ಈ ಮಾಹಿತಿಯನ್ನು ಮೈಸೂರಿನ ರೆಸಿಡೆಂಟನಾಗಿದ್ದ ಇಂಗ್ಲೆಡ್ಯೂ ಎಂಬ ವ್ಯಕ್ತಿಯಂದ ಕ್ಲೋಸ್ ಎಂಬಾತನು ಮಾಹಿತಿಯನ್ನು ಸಂಗ್ರಹಿಸಿದ್ದ. ಕ್ಲೋಸ್ ಎಂಬಾತನಿಂದ ರಾಮನಗರಕ್ಕೆ 'ಕ್ಲೋಸ್ ಪೇಟೆ' ಎಂದು ಕರೆಯುತ್ತಿದ್ದರು. ಕ್ಲೋಸ್‌ನು ಅಲ್ಲಿನ ವ್ಯಾಪಾರ ಚಟುವಟಿಕೆಗಳನ್ನು ನೋಡಿಕೊಳ್ಳುತ್ತಿದ್ದನು. ಇದರಿಂದ ವೀಣೆ ತಂತಿಯನ್ನು ಚನ್ನಪಟ್ಟಣದಲ್ಲಿ ತಯಾರಿಸಲಾಗುತ್ತಿತ್ತು ಎಂಬ ಮಾಹಿತಿಯನ್ನು ಕ್ಲೋಸ್‌ನಿಂದ ಮಾಹಿತಿ ಪಡೆದಿರುವ ಬುಕಾನನ್ ಅದರ ತಯಾರಿಕೆಯ ಬಗ್ಗೆ ಈ ರೀತಿ ವಿವರಿಸಿದ್ದಾನೆ. "ವೀಣೆ ತಂತಿಯನ್ನು ತಯಾರಿಸುವ ಪ್ರಾರಂಭದಲ್ಲಿ ಉಕ್ಕನ್ನು ತೆಗೆದುಕೊಂಡು ಅದನ್ನು ಬೆಂಕಿಯಲ್ಲಿ ಚೆನ್ನಾಗಿ ಕಾಯಿಸಿ ಅದು ಕೆಂಪು ಬಣ್ಣಕ್ಕೆ ತಿರುಗಿದಾಗ ಅದನ್ನು ತೆಗೆದುಕೊಂಡು ಸುತ್ತಿಗೆಯಿಂದ ಹೊಡೆದು ಪುನಃ ಬೆಂಕಿಯಲ್ಲಿ ಕಾಯಿಸಲಾಗುತ್ತದೆ. ಮತ್ತೆ ಕೆಂಪು ಬಣ್ಣಕ್ಕೆ ತಿರುಗಿದಾಗ ಮತ್ತೆ ಸುತ್ತಿಗೆಯಿಂದ ಹೊಡೆಯಲಾಗುತ್ತದೆ. ಹೀಗೆ ಕನಿಷ್ಠ ಐದು ಬಾರಿ ಈ ಪ್ರಕ್ರಿಯೆಯನ್ನು ಮಾಡಿದಾಗ ಉಕ್ಕು ತನ್ನ ರೂಪದ ಪ್ರಮಾಣವನ್ನು 1/5 ಭಾಗಕ್ಕೆ ಪಡೆಯುತ್ತದೆ ಆಗ ಅದನ್ನು ತೆಗೆದುಕೊಂಡು ಸಣ್ಣ ಸಣ್ಣ ಭಾಗಗಳಾಗಿ ಕತ್ತರಿಸಿ ಪುನಃ ಕಾಯಿಸಿದಾಗ ಅದು ಇನ್ನು ಮೆದುವಾಗುತ್ತದೆ. ಆಗ ಸಣ್ಣಸಣ್ಣರಂಧ್ರಗಳ ಮೂಲಕ ತಮಗೆ ಬೇಕಾದ ಗಾತ್ರದ ತಂತಿಗಳನ್ನು ಪಡೆಯಲು ಉಕ್ಕನ್ನು ಹರಿಬಿಟ್ಟು ತಂತಿಗಳನ್ನು ತಯಾರಿಸುತ್ತಿದ್ದರು."[8] ವೀಣೆ ತಂತಿಯ ಕೌಶಲವನ್ನು ಗಮನಿಸಿದಾಗ ಜನರಲ್ಲಿ ಹಿಂದೆಯೇ ಸಂಗೀತಾ ಆಸಕ್ತಿಯು ಇತ್ತು ಎಂಬುದನ್ನು ತಿಳಿಯಬಹುದಾಗಿದೆ.

### 3.6 ಉಪ್ಪು ತಯಾರಿಕೆ:

ಮಾಲೂರಿನ ತಾಲ್ಲೂಕಿನ ಟೇಕಲ್‌ನಲ್ಲಿ ತಯಾರಿಸಿದ ಉಪ್ಪನ್ನು ಮಾರಾಟ ಮಾಡುತ್ತಿದ್ದರು. ಒಂದು ಶುದ್ಧವಾದ ವಾತವಾರಣದ ಪ್ರದೇಶ ಭೂಮಿಯ ಮೇಲ್ಭಾಗ

ಮಣ್ಣನ್ನು ಅಗೆದು ಗುಡ್ಡೆಗಳನ್ನಾಗಿ ಮಾಡಿ ಸಂಗ್ರಹಿಸುತ್ತಿದ್ದರು. ಸಂಗ್ರಹಿಸಿದ ಮಣ್ಣಿನ ಸುತ್ತಲೂ 3 ಅಡಿ ಮತ್ತು ಒಂದು ಅಡಿ ಎತ್ತರ ಅರ್ಧವೃತ್ತಾಕಾರದಲ್ಲಿ ತೊಟ್ಟಿಗಳನ್ನು ಮೇಲ್ಭಾಗದವರೆಗೂ ತುಂಬುತ್ತಿದ್ದರು. ಆ ನಂತರ ತೊಟ್ಟಿಯೊಳಕ್ಕೆ ನೀರನ್ನು ಸುರಿಸುವುದು ಮಣ್ಣಿನಲ್ಲಿ ಇದ್ದಂತಹ ಉಪ್ಪಿನ ಅಂಶವನ್ನು ಕರಗಿಸಿ ತಳದಲ್ಲಿ ನಿಲ್ಲುವಂತೆ ಮಾಡುತ್ತಿದ್ದರು. ನಂತರ ದ್ರಾವಣವನ್ನು ಬಿಸಿಲಿನಲ್ಲಿ ಇಟ್ಟು ಒಣಗಿಸಿದ ಮೇಲೆ ಅದನ್ನು ಒಂದು ಸುಲ್ತಾನಿ ಪನಾಂಗೆ ಇಪ್ಪತ್ತು ಸೇರುಗಳಂತೆ ಮಾರಾಟ ಮಾಡುತ್ತಿದ್ದರು.[9]

**3.7 ಮಡಿಕೆ ತಯಾರಿಕೆ:**

ಕುಂಬಾರರು ಮಡಿಕೆಗಳನ್ನು ತಯಾರಿಸುತ್ತಿದ್ದರು. ಕುಂಬಾರರರು ತಮಗೆ ಬೇಕಾದ ಮಣ್ಣನ್ನು ಕೆರೆಗಳಲ್ಲಿ, ನದಿಗಳಲ್ಲಿ, ನಾಲೆಗಳಲ್ಲಿ ಶೋಧಿಸುತ್ತಿದ್ದರು. ಕುಂಬಾರರು ವಿವಿಧ ವಸ್ತುಗಳ ತಯಾರಿಕೆಗಗಿ ಚಕ್ರ, ಕಲ್ಲು, ಕೋಲನ್ನು ಬಳಸಿಕೊಳ್ಳುತ್ತಿದ್ದರು. ಮಡಿಕೆಗಳನ್ನು ತಯಾರಿಸುವಾಗ ತಮ್ಮ ಕೌಶಲವನ್ನು ತೋರಿಸುತ್ತಿದ್ದರು ಮಡಿಕೆ. ಹೂವಿನಕುಂಡ, ಮಣ್ಣಿನತಟ್ಟೆ, ಬಾನಿ, ಊಟದಪಾತ್ರೆ ಗೌರಿ ಗಣೇಶ ಪ್ರತಿಮೆಗಳನ್ನು, ಬೆಳೆದ ಧಾನ್ಯಗಳನ್ನು ಸುರಕ್ಷಿತವಾಗಿ ಸಂಗ್ರಹಿಸಿ ಇಟ್ಟುಕೊಳ್ಳಲು ದೊಡ್ಡಗುಡಾಣಗಳನ್ನು ತಯಾರಿಸುತ್ತಿದ್ದರು. ಈ ಗುಡಾಣಗಳು 6 ಅಡಿ ಎತ್ತರವಿರುತ್ತಿದ್ದವು. ಕೋಲಾರ ಜಿಲ್ಲೆಯ ಎಲ್ಲಾ ಪ್ರದೇಶಗಳಲ್ಲಿ ಮಡಿಕೆ ತಯಾರಿಕೆ ಸಾಮಾನ್ಯವಾಗಿ ಕಂಡು ಬಂದಿದ್ದು, ಮುಳಬಾಗಿಲು, ಶ್ರೀನಿವಾಪುರ, ಶಿಡ್ಲಘಟದಲ್ಲಿ ಹೆಚ್ಚಾಗಿ ಕಂಡುಬಂದಿವೆ.[10]

**3.8 ಗಾಡಿಗಳ ತಯಾರಿಕೆ:**

ಮೈಸೂರು ಪ್ರಾಂತ್ಯಗಳಲ್ಲಿ ವಾಸವಾಗಿದ್ದ ಬಡಗಿಗಳು ರೈತರಿಗೆ ಬೇಕಾದ ವ್ಯವಸಾಯೋಪಕರಣಗಳನ್ನು ತಯಾರಿಸಿಕೊಡುತ್ತಿದ್ದರು. ಹಳ್ಳಿಯ ಬಡಗಿಗಳು ಗಾಡಿಗಳನ್ನು ತಯಾರಿಸುತ್ತಿದ್ದರು. ಒಂದು ಕಾರ್ಖಾನೆಯಲ್ಲಿ ವರ್ಷಕ್ಕೆ ಸರಾಸರಿ 30 ರಿಂದ 50 ಗಾಡಿಗಳನ್ನು ತಯಾರಿಸುತ್ತಿದ್ದರು. ಮೈಸೂರು ಸಂಸ್ಥಾನದಲ್ಲಿ ವ್ಯಾಪಾರ ವಾಣಿಜ್ಯ ಚಟುವಟಿಕೆಗಳಿಗೆ ಬಡಗಿಗಳು ತಯಾರಿಸಿದ ಗಾಡಿಗಳು ಅತ್ಯಂತ ಮಹತ್ವ ಪೂರ್ಣವಾಗಿದ್ದು ಇದ್ದರಿಂದ ಗಾಡಿಗಳ ಬೇಡಿಕೆ ಹೆಚ್ಚಾಗಿದ್ದವು.[11] ಗಾಡಿಗಳನ್ನು ಮೈಸೂರು ರಾಜ್ಯಕ್ಕೆ ಒಳಪಟ್ಟಿದ್ದ ಬೆಂಗಳೂರಿನ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಹಾಗೂ ಕುರಿಸಿ ಶಿಕಾರಿಪುರ, ತುಮಕೂರು ಜಿಲ್ಲೆಯ ತಿಪಟೂರು, ಗುಬ್ಬಿ ಮೊದಲಾದ ಪ್ರದೇಶಗಳಲ್ಲಿ ತಯಾರಿಸುತ್ತಿದ್ದರು.

**3.9 ಬಿದಿರಿನ ವಸ್ತುಗಳ ತಯಾರಿಕೆ:**

ಮೇದಾರರು ಎಂಬ ವರ್ಗವು ಬಿದಿರಿನಿಂದ ಚಾಪೆ ಹಾಗೂ ಬಿದಿರಿನ ಬುಟ್ಟಿಗಳನ್ನು ತಯಾರಿಸಿ ನಂತರ ಅದನ್ನು ಅವರೇ ಮಾರಾಟ ಮಾಡುತ್ತಿದ್ದರು.

ಇವರು ಕಡೂರು ಮೈಸೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಹೆಚ್ಚಾಗಿದ್ದರು ಅಲ್ಲದೇ ರೇಷ್ಮೆಹುಳುಗಳಿಗೆ ಸಹಕಾರಿ ಯಾಗುದಂತಹ ಬಿದುರಿನ ತಟ್ಟೆಗಳನ್ನು ಹಾಗೂ ಚಂದ್ರಿಕೆಗಳನ್ನು ತಯಾರಿಸುತ್ತಿದ್ದರು. ಚಂದ್ರಿಕೆಯನ್ನು ಬಿದರಿನ ಚಾಪೆ, ಬಿದಿರಿನ ಕೋಲು ಹಾಗೂ ತೆಂಗಿನನಾರಿನ ಹಗ್ಗದ ಸಹಾಯದಿಂದ ತಯಾರಿಸುತ್ತಿದ್ದರು. ಕುಣಿಗಲ್, ಮೈಸೂರು, ಕಡೂರು, ಸಾಗರ, ಸೊರಬ, ಮತ್ತು ಹಾಸನ ಜಿಲ್ಲೆಯ ವಿವಿಧ ಭಾಗಗಳಲ್ಲಿ ಬಿದಿರಿನ ವಸ್ತುಗಳನ್ನು ತಯಾರಿಸುತ್ತಿದ್ದರು.[12]

**3.10 ಚರ್ಮ ಹದಮಾಡುವಿಕೆ:**

ಮೋಚಿಗಳು ಎಂಬ ವರ್ಗದವರು ಚರ್ಮದ ವಸ್ತುಗಳ ತಯಾರಿಕೆ ವೃತ್ತಿಯಲ್ಲಿ ತೊಡಗಿಕೊಂಡಿದ್ದರು. ಇವರು ಚಾವಡಿ, ಚೀಲಗಳು, ಚರ್ಮದ ಹಗ್ಗಗಳು ಚರ್ಮ ವಾದ್ಯಗಳು ಮೊದಲಾದವುಗಳನ್ನು ತಯಾರಿಸುತ್ತಿದ್ದರು. ಗ್ರಾಮ ಪ್ರದೇಶದಲ್ಲಿನ ಈ ವೃತ್ತಿ ಪುರತಾನವಾಗಿತ್ತು. ಚರ್ಮವನ್ನು ಹದಮಾಡುವಾಗ ಚರ್ಮಕ್ಕೆ ಉಪ್ಪು ಸವರಿ ಚರ್ಮವನ್ನು ಸುಣ್ಣದ ನೀರಿನಲ್ಲಿ 6 ರಿಂದ 8 ದಿನದವರೆಗೆ ನೆನಸುತ್ತಿದ್ದರು. ಇದರಿಂದಾಗಿ ಚರ್ಮದ ಮೇಲಿನ ಕೂದಲು ಉದುರಿಬಿಡುತ್ತಿತ್ತು. ಪುನಃ ಕೂದಲು ರಹಿತವಾದ ಚರ್ಮವನ್ನು ಹೊಸ ಸುಣ್ಣದ ತಿಳಿ ನೀರಿನಲ್ಲಿ 4 ದಿನಗಳವರೆಗೆ ನೆನಸುತ್ತಿದ್ದರು. ಇದರಿಂದ ಅಲ್ಪಸ್ವಲ್ಪ ಅಂಟಿಕೊಂಡಿದ್ದ ಮಾಂಸವನ್ನು ಚರ್ಮದದಿಂದ ಬೇರ್ಪಡಿಸಲು ಅನುಕೂಲವಾಗಿತ್ತು ಹಾಗೂ ಚರ್ಮವನ್ನು ತಂಗಡಿ ತೊಗಟಿಯ ನೀರಿನಲ್ಲಿ ನೆನೆಸಿ ನಂತರ ಚರ್ಮವನ್ನು ಹದಮಾಡುತ್ತಿದ್ದರು. ಚರ್ಮಕ್ಕೆ ಹೊಂಗೆ ಎಣ್ಣೆಯನ್ನು ಸವರಿ ಹದ ಮಾಡುತ್ತಿದ್ದರು. ಇದಲ್ಲದೆ ಎಣ್ಣೆ ಮತ್ತು ಕೊಬ್ಬನ್ನು ಸವರುತ್ತಿದ್ದರು. ಅಲ್ಲದೆ ಅಮೆರಿಕನ್ ಹಿಟ್ಟನ್ನು ಬಳಸಿಕೊಳ್ಳುತ್ತಿದ್ದರು. ಕೊಬ್ಬು ಮತ್ತು ಎಣ್ಣೆಯನ್ನು ಸವರಿ ಹಲಗೆಯ ಸಹಾಯದಿಂದ ಹಿಟ್ಟು ಹಾಕಿದ ಚರ್ಮದ ಮೇಲೆ ಹಲಗೆ ಆಡಿಸುತ್ತಿದ್ದರು. ಒಂದು ದಿನದ ನಂತರ ಒಣಗಲು ಬಿಟ್ಟು ನಂತರ ಚರ್ಮವನ್ನು ಹದ ಮಾಡುವ ಕಾರ್ಯ ಪೂರ್ಣವಾಗಿ ಮಾರುಕಟ್ಟೆಗೆ ಸಾಗಿಸಲಾಗುತ್ತಿತ್ತು. ಚರ್ಮವನ್ನು ಹದಮಾಡಲು ತೊಗಟೆ, ತಂಗಡಿ, ಸುಣ್ಣ, ಗಾಲ್‌ನಟ್ ಎಣ್ಣೆ ಉಪಯೋಗಿಸಿಕೊಳ್ಳುತ್ತಿದ್ದರು. ಪ್ರತಿ 10 ಪೌಂಡ್ ಚರ್ಮ ಹದಮಾಡಲು ಸರಾಸರಿ ಇಪ್ಪತ್ತೆರಡೂವರೆ ತೊಗಟೆ ಬಳಸುತ್ತಿದ್ದರು. ಮೂರುವರೆ ಸೇರು ಗಾಲ್‌ನಟ್, ಸುಮಾರು 5.8 ಪೌಂಡ್ ಎಣ್ಣೆ, ಒಂದುವರೆ ಸೇರು ಸುಣ್ಣವನ್ನು, ಬಳಸಿಕೊಳ್ಳುತ್ತಿದ್ದರು. ಮಾದಿಗರು ಎಮ್ಮೆ ಮತ್ತು ದನದ ಚರ್ಮ ಹದ ಮಾಡುವ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಬೆಂಗಳೂರಿನ ಪ್ರದೇಶಗಳಲ್ಲಿ ಮುಸ್ಲಿಮರು ಸಹ ಚರ್ಮ ಹದ ಮಾಡುವ ಕಾರ್ಯಾಗಾರದಲ್ಲಿ ತೊಡಗಿದ್ದರು.[13] ತುಮಕೂರು ಜಿಲ್ಲೆಯ ಮಧುಗಿರಿ, ಶಿರಾ, ಬೆಂಗಳೂರು, ತರೀಕೆರೆ, ಹುಣಸೂರು ಹಾಗೂ ಚಿತ್ರದುರ್ಗ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಚರ್ಮ ತಯಾರಿಸುತ್ತಿದ್ದರು.

### 3.11 ಚಪ್ಪಲಿ ತಯಾರಿಕೆ:

ಚಪ್ಪಲಿ ತಯಾರಿಕೆಯು ಒಂದು ಪ್ರಮುಖ ಕಸುಬಾಗಿತ್ತು. ಟಿಪ್ಪುವಿನ ಕಾಲದಲ್ಲಿ ಕೋಲಾರದಲ್ಲಿ ಕಂಡು ಬರುವ ಮೋಚಿನವರು ಎಂಬ ವರ್ಗವು ಚಪ್ಪಲಿಯನ್ನು ತಯಾರಿಸುತ್ತಿದ್ದರು. ಪಾದರಕ್ಷೆಗಳನ್ನು, ಚಡಾವುಗಳನ್ನು ಹೊಲಿಯುವ ರಜಪೂತ್ ಜನಾಂಗವು ಅಜ್ಮೀರ್‌ನಿಂದ ಔರಂಗಜೇಬನ ಜನರಲ್ ಆಗಿದ್ದ ಕಾಸಿಂಖಾನ್ ಜೊತೆಯಲ್ಲಿ ಬಂದ ಇವರು ಶಿರಾ ಮತ್ತು ಕೋಲಾರಗಳಲ್ಲಿ ನೆಲೆಸಿ ಹಿಂದೂಸ್ಥಾನಿ ಭಾಷೆಯಲ್ಲಿ ಮಾತನಾಡುತ್ತಿದ್ದರು. ಪಾದರಕ್ಷೆಯ ತಯಾರಿಕೆಯನ್ನು ಬಿಟ್ಟು ಇವರು ಬೇರೆ ಯಾವುದೇ ರೀತಿಯ ವಸ್ತುಗಳನ್ನು ತಯಾರಿಸುತ್ತಿರಲಿಲ್ಲ.[14]

### 3.12 ಸುಣ್ಣ ತಯಾರಿಕೆ:

ಸಮುದ್ರ ತೀರದಲ್ಲಿ ದೊರಕುವ ಕಪ್ಪೆ ಚಿಪ್ಪಿನಿಂದ ಮತ್ತು ಗಣಿಗಳಿಂದ ತೆಗೆಯಲ್ಪಟ್ಟ ಸುಣ್ಣದ ಕಲ್ಲಿನಿಂದ ಸುಣ್ಣವನ್ನು ತಯಾರಿಸಲಾಗುತ್ತದೆ. ಬೆಂಗಳೂರಿನ ವೈಟ್ ಫೀಲ್ಡ್ ಸಮೀಪವಿರುವ ಕಾಸರಗೋಡಿನಲ್ಲಿ ಸುಣ್ಣವನ್ನು ತಯಾರಿಸುವ ಭಟ್ಟಿಗಳಿದ್ದವು. ಸುಣ್ಣಗಾರವೆಂಬ ಒಂದು ಜನಾಂಗ ಸುಣ್ಣವನ್ನು ತಯಾರಿಸುತ್ತಿದ್ದರು.[15]

### 3.13 ಬಣ್ಣ ತಯಾರಿಕೆ:

ಬಣ್ಣ ಹಾಕುವ ಕಲೆಯು ಆದಿಲ್‌ಶಾಹಿಗಳ ಕಾಲದಲ್ಲಿ ಮುಸಲ್ಮಾನರಿಂದ ಕರ್ನಾಟಕದಲ್ಲಿ ರೂಢಿಗೆ ಬಂದಿತ್ತು. ನೀಲಗಾರ ಎಂಬ ಸಮುದಾಯ ನೂಲಿಗೆ ಬಣ್ಣ ಹಾಕುತ್ತಿದ್ದರು. ನೀಲಿಯೊಳಗೆ ಸುಣ್ಣ, ಬಾಳೇಬೂದಿ, ಹೊನ್ನವರೆ ಬೀಜ ಇದನ್ನು ಕೂಡಿಸಿ ಬಣ್ಣ ಮಾಡುತ್ತಿದ್ದರು. ನಾಗಲಿಕರೆಂಬ ಲಿಂಗವಂತರು ನೂಲಿಗೆ ಬಣ್ಣ ಕೊಡುವ ಕೆಲಸವನ್ನು ಮಾಡುತ್ತಿದ್ದರು. ಹಾಗೆಯೇ ಬಣ್ಣಗಾರರು ಎಂಬ ಜಾತಿಯವರು ಆಗಿನ ಕೆನರಾ ಪ್ರದೇಶಗಳಲ್ಲಿ ಹೆಚ್ಚಾಗಿದ್ದರು. ಇವರು ಸಹ ಲಿಂಗವಂತರಾಗಿದ್ದರು. ಶ್ರೀರಂಗಪಟ್ಟಣದಲ್ಲಿರುವ ದರಿಯಾ ದೌಲತ್ ಅರಮನೆ ಹಾಗೂ ಗುಂಬಜ್ ಅನ್ನು ನೋಡಿದರೆ ಅಂದಿನ ಬಣ್ಣ ತಯಾರಿಕೆಯ ಕೌಶಲ್ಯದ ಬಗ್ಗೆ ತಿಳಿಯಬಹುದಾಗಿದೆ.

ಹತ್ತಿ ಬಟ್ಟೆಗೆ ಬಣ್ಣ ಹಾಕುವ ಕಲೆಯನ್ನು ಬುಕಾನನ್ ಈ ರೀತಿ ವಿವರಿಸಿದ್ದಾರೆ "ಎಳ್ಳೆಣ್ಣೆ, ಚೌಳುಪ್ಪು, ಮುದ್ದಿಬೇರು, ಕುರಿಹಿಕ್ಕೆ, ಮರದತೊಗಟೆಗಳನ್ನು ಬಣ್ಣ ಹಾಕಲು ಬಳಸುತ್ತಿದ್ದರು. ನೀಳಗಾರರು ಉತ್ತಮವಾಗಿ ಹತ್ತಿ ಬಟ್ಟೆಗೆ ಹಸಿರು ಬಣ್ಣ ಕೊಡುತ್ತಿದ್ದರು. ಇದರ ಜೊತೆಗೆ ಅರಿಶಿನ ಮತ್ತು ಅರಶಿನಪುಡಿಯನ್ನು ಬಳಸುತ್ತಿದ್ದರು ದೇವಾಂಗರು ಕೆಲವುಜಾತಿಯ ಹೂಗಳನ್ನು ಅದರಲ್ಲೂ ಎಕ್ಕದ ಹೂಗಳನ್ನು ಬಳಸಿ ಬಣ್ಣದ ಬಟ್ಟೆ ತಯಾರಿಸುತ್ತಿದ್ದರು."[16]

### 3.14 ಆಟಿಕೆ ವಸ್ತುಗಳು:

ಮರದ ಆಟಿಕೆ ಸಾಮಾನುಗಳನ್ನು ಮಾಡುವ ಹಾಗೂ ಅವುಗಳಿಗೆ ಬಣ್ಣ ಹಾಕುವುದು ಬೀಜಾಪುರದ ಆದಿಲ್ ಶಾಹಿಗಳ ಕಾಲದಲ್ಲಿ ಮುಸಲ್ಮಾನರಿಂದ ಕರ್ನಾಟಕದಲ್ಲಿ ರೂಢಿಗೆ ಬಂದಿತು. ಚನ್ನಪಟ್ಟಣವು ಮರದ ಬೊಂಬೆಗಳ ತಯಾರಿಕೆಗೆ ಪ್ರಸಿದ್ಧಿಯಾಗಿತ್ತು. ಈ ಹಿಂದೆ ಚನ್ನಪಟ್ಟಣದಲ್ಲಿ ಆಳ್ವಿಕೆ ನಡೆಸುತ್ತಿದ್ದ ಚೋಳರು, ಹೊಯ್ಸಳರು, ಪಾಳೆಯಗಾರರ ಕಾಲದಲ್ಲಿ ದೇವರ ಶಿಲ್ಪಗಳು, ಮರದ ಬೊಂಬೆಗಳನ್ನು ವಿವಿಧ ಭಂಗಿಯಲ್ಲಿ ತಯಾರಿಸಲಾಗುತ್ತಿತ್ತು. ಹೈದರಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಮರದ ಆಟದ ಸಾಮಾನುಗಳ ತಯಾರಿಕೆಗೆ ಉತ್ತಮ ರೀತಿಯಲ್ಲಿ ಪ್ರೋತ್ಸಾಹ ದೊರೆಯಿತು. ಮರದ ಆಟದ ಸಾಮಾನುಗಳನ್ನು ತಯಾರಿಸುವುದಕ್ಕೆ ಸೂಕ್ತವಾದ ಕಚ್ಚಾವಸ್ತು ಹಾಲೆಮರೆ. ಚನ್ನಪಟ್ಟಣದಲ್ಲಿ ಹೆಚ್ಚಾಗಿ ದೊರೆಯುತ್ತಿದ್ದದು ಈ ಉದ್ಯಮದ ಬೆಳವಣಿಗೆಗೆ ಕಾರಣವಾಯಿತು. ಮುಸಲ್ಮಾನ ವ್ಯಕ್ತಿಯೊಬ್ಬ ಜಪಾನಿನಲ್ಲಿ ಬೊಂಬೆಗಳ ತಯಾರಿಕಾ ಕೌಶಲದಲ್ಲಿ ತರಬೇತಿ ಪಡೆದು ಚನ್ನಪಟ್ಟಣ ಬಂದಾಗ ಇಲ್ಲಿನ ಹಾಲೆಮರಗಳ ಮೃದುವಾಗಿದ್ದನ್ನು ಗುರ್ತಿಸಿ ಇದರಿಂದ ಮರದ ಬೊಂಬೆಗಳನ್ನು ತಯಾರಿಸಬಹುದು ಎಂದು ತಿಳಿದು ಚನ್ನಪಟ್ಟಣದ ಪ್ರದೇಶದಲ್ಲಿ ಮರದ ಬೊಂಬೆ ತಯಾರಿಕಾ ಕೈಗಾರಿಕೆಯನ್ನು ಸ್ಥಾಪಿಸಿದನು.[17] ಹಾಗೆಯೇ ಚನ್ನಪಟ್ಟಣದ ಜನರು ಈ ಕಲೆಯನ್ನು ಅಳವಡಿಸಿಕೊಂಡು ಪ್ರಸ್ತುತ ದಿನದವರೆಗೂ ಹಾಲೆಮರವನ್ನು ಉಪಯೋಗಿಸಿಕೊಂಡು ಆಧುನಿಕ ಕಬ್ಬಿಣದ ಲೇತ್ ಮೆಷನ್‌ಗಳನ್ನು ಬಳಸಿಕೊಂಡು ಬೊಂಬೆಗಳನ್ನು ತಯಾರಿಸಿ ಅದಕ್ಕೆ ಬಣ್ಣ ಹಚ್ಚಿ ವಿದೇಶಗಳಿಗೆ ರಫ್ತು ಮಾಡಲಾಗುತ್ತಿದೆ. ಮಾಗಡಿ, ಚನ್ನಪಟ್ಟಣ, ಬೆಂಗಳೂರು ಶಿವಮೊಗ್ಗ, ಸಾಗರ, ಸೊರಬಗಳಲ್ಲಿ ಆಟಿಕೆ ವಸ್ತುಗಳ ತಯಾರಿಕಾ ಕಾರ್ಖಾನೆಗಳು ಸ್ಥಾಪಿತವಾಗಿದ್ದವು.

ಹೈದರಾಲಿ ಮತ್ತು ಟಿಪ್ಪುಸ್ತುಲಾನರ ಆಡಳಿತಾವಧಿಯಲ್ಲಿ ಅಸ್ತಿತ್ವದಲ್ಲಿದ್ದ ಕೈಗಾರಿಕೆಗಳು ಅಂದಿನ ಜನರ ಆರ್ಥಿಕ ಸ್ಥಿತಿಗತಿಗಳು ಉತ್ತಮಗೊಳ್ಳುವುದಕ್ಕೆ ಕಾರಣವಾಗಿದ್ದವಲ್ಲದೆ ರಾಜ್ಯದ ಆದಾಯದ ಮೂಲಗಳೂ ಆಗಿದ್ದವು. ಈ ದಿಸೆಯಲ್ಲಿ ಹೈದರ್ ಮತ್ತು ಟಿಪ್ಪು ಕೈಗಾರಿಕೆಗಳ ಅಭಿವೃದ್ಧಿಗಾಗಿ ಶ್ರಮಿಸಿದರು.

**ಕೊನೆ ಟಿಪ್ಪಣಿಗಳು :**

---

[1] ಗೋಪಾಲ್, ಆರ್. (ಸಂ.), 'ಚಿತ್ರದುರ್ಗ ಇತಿಹಾಸ ಮತ್ತು ಪುರಾತತ್ವ', 2005, ಪು.264.

[2] ರೈಸ್, ಬಿ.ಎಲ್., ಮೈಸೂರು ಗ್ಯಾಸೆಟಿಯರ್, ಸಂ.1, 1907, ಪು.541.

[3] ಹಯವದನರಾವ್, ಸಿ., ಮೈಸೂರು ಗ್ಯಾಸೆಟಿಯರ್, ಸಂ.3, 1929, ಪು.264.

[4] ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್', ಸಂ.–1, 1870, ಪು.159.

[5] ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.21.

[6] ಗೋಪಾಲ್, ಆರ್. (ಸಂ.), 'ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2005, ಪು.265–266.

[7] ಸೂರ್ಯನಾಥ ಯು. ಕಾಮತ್ (ಮು.ಸಂ.), ಕರ್ನಾಟಕ ಗ್ಯಾಸೆಟಿಯರ್, ಸಂ.–1, 1984, ಪು.259.

[8] ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು', ಸಂ.–1, ಪು.151–152.

[9] ನೀಲಾಮಂಜುನಾಥ್ (ಮು.ಸಂ.), ಕರ್ನಾಟಕ ಕೈಪಿಡಿ, 2012, ಪು.305.

[10] ಹಯವದನರಾವ್, ಸಿ., ಮೈಸೂರು ಗ್ಯಾಸೆಟಿಯರ್, ಸಂ.3, 1929, ಪು.254.

[11] ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.23.

[12] ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.43.

[13] ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.31–32.

[14] ಗೋಪಾಲ್, ಆರ್. (ಸಂ.), 'ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2004, ಪು.244.

[15] ಅದೇ, ಪು.305.

[16] ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.11.

[17] ಕೃಷ್ಣೇಗೌಡ, ಹೆಚ್. ಮತ್ತು ನಾರಾಯಣಸ್ವಾಮಿ ದೇ (ಸಂ.), ಕಣ್ವಸಿರಿ, 2011, ಪು.28–29.

## ಅಧ್ಯಾಯ-4

# ನಾಣ್ಯ ವ್ಯವಸ್ಥೆ

ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿ ನಾಣ್ಯ ತಯಾರಿಕೆಯು ಒಂದು ಪ್ರಮುಖ ಉದ್ಯಮವಾಗಿತ್ತು. ಹೈದರಾಲಿ ಮತ್ತು ಟಿಪ್ಪು ನಾಣ್ಯ ತಯಾರಿಕೆಗೆ ಟಂಕಸಾಲೆಗಳನ್ನು ಸ್ಥಾಪಿಸಿ ವಿವಿಧ ಬಗೆಯ ನಾಣ್ಯಗಳನ್ನು ಚಲಾವಣೆಗೆ ತಂದರು. ಅವರ ನಾಣ್ಯಗಳು ಚಿನ್ನ, ಬೆಳ್ಳಿ, ತಾಮ್ರಗಳಿಂದ ತಯಾರಿಸಲ್ಪಟ್ಟಿದ್ದು, ದೇವತೆಗಳ ಚಿತ್ರ, ಪ್ರಾಣಿಯ ಚಿತ್ರ, ಸಂಖ್ಯೆಗಳು ಅರೇಬಿಕ್ ಭಾಷೆಯ ಲಿಪಿ ಮೊದಲಾದ ಅಂಶಗಳನ್ನು ಹೊಂದಿದ್ದವು. ಇವರು ವಿಜಯನಗರ ಅರಸರು ಹಾಗೂ ಕೆಳದಿಯ ಅರಸರುಗಳ ಕಾಲದಲ್ಲಿದ್ದ ನಾಣ್ಯಗಳ ಮಾದರಿಯನ್ನು ಅನುಸರಿಸಿದರು. ಅಲ್ಲದೆ ಕೆಲವು ಬದಲಾವಣೆಯನ್ನು ಹೊರತಂದರು. ಆದರೆ ಟಿಪ್ಪು ಅಚ್ಚು ಹಾಕಿಸಿದ ನಾಣ್ಯಗಳಲ್ಲಿದ್ದ ತಾಂತ್ರಿಕ ಕೌಶಲ್ಯ ಆಧುನಿಕ ನಾಣ್ಯ ಶಾಸ್ತ್ರಜ್ಞರನ್ನು ಆಶ್ಚರ್ಯಗೊಳಿಸುವಂತಹದ್ದಾಗಿದೆ. ಹೈದರಾಲಿಯು ಶ್ರೀರಂಗಪಟ್ಟಣ, ನಗರ, ಬಳ್ಳಾರಿಯಲ್ಲಿ ಟಂಕಸಾಲೆಯನ್ನು ಸ್ಥಾಪಿಸಿದ್ದನು. ಟಿಪ್ಪು ಬಿದನೂರು, ನಗರ, ಚಿತ್ರದುರ್ಗ, ಗುರ್ರಂಕೊಂಡ, ಹೊಳೆ ಹೊನ್ನೂರು ಧಾರವಾಡ ಸತಾರ, ಅಬರ್‌ಫರ್, ಗುತ್ತಿ, ಚಿತ್ರದುರ್ಗ ಮುಂತಾದ ಪ್ರದೇಶಗಳಲ್ಲಿ ಟಂಕಸಾಲೆಗಳನ್ನು ಸ್ಥಾಪಿಸಿದ್ದನು. ಇಲ್ಲಿ ತಯಾರಿಸಿದ ನಾಣ್ಯಗಳು ಸುಂದರವಾಗಿದ್ದುದಲ್ಲದೆ ತಮ್ಮ ಇತರ ಗುಣಲಕ್ಷಣಗಳಿಂದ ನಾಣ್ಯಶಾಸ್ತ್ರಜ್ಞರನ್ನು ತಮ್ಮತ್ತ ಸೆಳೆದಿವೆ. ಹಾಗಾಗಿ ಹೈದರಾಲಿ ಮತ್ತು ಟಿಪ್ಪುವಿನ ನಾಣ್ಯಗಳ ವಿಷಯದಲ್ಲಿ ಹಲವಾರು ನಾಣ್ಯಶಾಸ್ತ್ರಜ್ಞರು ಪರಿಶೋಧನೆಗಳನ್ನು ಮಾಡಿದ್ದಾರೆ.

ಎಡ್ವರ್ಡ್ ಮೂರ್ ಎಂಬಾತನು ಕ್ರಿ.ಶ. 1794 ರಲ್ಲಿ ರಚಿಸಿದ "ನರೇಟಿವ್ಸ್" ಎಂಬ ಗ್ರಂಥದಲ್ಲಿ ಟಿಪ್ಪುಸುಲ್ತಾನನ ನಾಣ್ಯಗಳನ್ನು ಕುರಿತು ತಿಳಿಸಿದ್ದಾನೆ. ಮಾರ್ಸ್‌ಟೆನ್ ಮತ್ತು ಹಾಕ್ಸ್ ಅವರ ಗ್ರಂಥಗಳಲ್ಲಿ ಹೈದರ್ ಮತ್ತು ಟಿಪ್ಪು ಅವರ ವಿರಳವಾದ ನಾಣ್ಯಗಳ ಬಗ್ಗೆ ತಿಳಿಸಿದ್ದಾರೆ. ಕಿರ್ಕ್ ಪ್ಯಾಟ್ರಿಕ್ ಎಂಬಾತನು ತನ್ನ ಗ್ರಂಥ 'ಸೆಲೆಕ್ಟ್ ಲೆಟರ್ಸ್ ಆಫ್ ಟಿಪ್ಪು ಸುಲ್ತಾನ್'ನಲ್ಲಿ ಟಿಪ್ಪುವಿನ ನಾಣ್ಯಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಥರ್ಸ್ಟನ್ ಎಂಬಾತ ಮದ್ರಾಸಿನ ಸರ್ಕಾರಿ ವಸ್ತು ಸಂಗ್ರಹಾಲಯದಲ್ಲಿದ್ದ ಟಿಪ್ಪು ಸುಲ್ತಾನನ ನಾಣ್ಯಗಳ ಬಗ್ಗೆ ವಿವರಿಸಿದ್ದಾನೆ. ಹಾಗೆಯೇ ಟಫೆನೆಲ್ ಎಂಬುವವನು ಬೆಂಗಳೂರಿನ ಸರ್ಕಾರಿ ವಸ್ತು ಸಂಗ್ರಹಾಲಯದಲ್ಲಿದ್ದ ಹೈದರಾಲಿ ಮತ್ತು ಟಿಪ್ಪು ನಾಣ್ಯಗಳ ಬಗ್ಗೆ ತಿಳಿಸಿಕೊಟ್ಟಿದ್ದಾರೆ. ಜಾಕ್‌ಸನ್ ಎಂಬುವರು 'ಕಾಯಿನ್ ಕಲೆಕ್ಟಿಂಗ್ ಇನ್ ಮೈಸೂರ್' ಎಂಬ ಗ್ರಂಥದಲ್ಲಿ ಹೈದರಾಲಿ ಮತ್ತು ಟಿಪ್ಪು ನಾಣ್ಯಗಳನ್ನು ವಿವರಿಸಿದ್ದಾರೆ.[1] ಕಾಯಿನ್ಸ್ ಆಫ್ ಟಿಪ್ಪು ಸುಲ್ತಾನ್ ಎಂಬ ಟೈಲರ್‌ರವರ ಸಣ್ಣ ಗ್ರಂಥವು ಟಿಪ್ಪುವಿನ ನಾಣ್ಯಗಳಲ್ಲಿ ಟಂಕಿಸಲಾಗಿದ್ದ ವರ್ಷಗಳನ್ನು ವಿವರಿಸುವಲ್ಲಿ ಹೆಚ್ಚು

ಮಹತ್ವಪೂರ್ಣದ್ದಾಗಿದೆ. ಈ ಮೇಲ್ಕಂಡ ಗ್ರಂಥಗಳಲ್ಲಿದ್ದ ಎಲ್ಲಾ ವಿಷಯಗಳನ್ನು ಹೆಂಡರ್ ಸನ್ ಅರ್ಥಮಾಡಿಕೊಂಡು ಒಂದೆಡೆ ಕ್ರೂಢಿಕರಿಸಿ ತನ್ನ "ಕಾಯಿನ್ಸ್ ಆಫ್ ಟಿಪ್ಪು ಸುಲ್ತಾನ್" ಎಂಬ ಗ್ರಂಥದಲ್ಲಿ ಯಾವ ಸ್ಥಳದ ಟಂಕಸಾಲೆಯಿಂದ ಯಾವ ಹೆಸರಿನ ನಾಣ್ಯ, ಅವುಗಳ ತೂಕ, ವಿಸ್ತೀರ್ಣ ಮತ್ತು ಯಾವ ವರ್ಷದಲ್ಲಿ ಅದು ಅಚ್ಚಾಯಿತು ಮುಂತಾದ ವಿಷಯಗಳ ಮಾಹಿತಿಯನ್ನು ಈ ಗ್ರಂಥವು ತಿಳಿಸುತ್ತದೆ.[2]

### 4.1 ಹೈದರಾಲಿಯ ನಾಣ್ಯಗಳ ವ್ಯವಸ್ಥೆ:

ಹೈದರಾಲಿಯು ಅವಿದ್ಯಾವಂತನಾದರೂ ತನ್ನ ರಾಜಕೀಯದ ಚಾಣಾಕ್ಷತನದಿಂದ ಕ್ರಿ.ಶ. 1761ರಲ್ಲಿ ಮೈಸೂರಿನ ದಳವಾಯಿ ನಂಜರಾಜಯ್ಯನನ್ನು ಅಧಿಕಾರದಿಂದ ಕೆಳಗಿಳಿಸಿ ಮೈಸೂರು ರಾಜರುಗಳನ್ನು ತನ್ನ ಅಧಿಕಾರದ ಕೈ ಮುಷ್ಠಿಯಲ್ಲಿ ಹಿಡಿದುಕೊಂಡು ನಂತರ ತನ್ನ ನಾಣ್ಯಗಳನ್ನು ಕ್ರಿ.ಶ. 1763ರಲ್ಲಿ ಮುದ್ರಿಸಲು ಪ್ರಾರಂಭಿಸಿದನು.[3]

ನಾಣ್ಯಗಳ ಗುಣಲಕ್ಷಣಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಯನ್ನು ತಂದು ನಾಣ್ಯ ಟಂಕಸಾಲೆಗಳನ್ನು ಬಳ್ಳಾರಿ ಪಟ್ಟಣ ನಗರ ಪ್ರದೇಶಗಳಲ್ಲಿ ಸ್ಥಾಪಿಸಿ ಚಿನ್ನ, ತಾಮ್ರ, ಲೋಹದ ನಾಣ್ಯಗಳನ್ನು ಟಂಕಿಸಿದನು. ನಾಣ್ಯಗಳಲ್ಲಿ ಹಿಂದೂ ದೇವತೆಗಳಾದ ಶಿವ, ಪಾರ್ವತಿ, ವಿಷ್ಣು ಚಿತ್ರಗಳನ್ನು ಮುದ್ರಿಸಿದನು. ಪರ್ಷಿಯನ್ ಭಾಷೆಯ ಮೊದಲನೆಯ ಅಕ್ಷರವಾದ 'ಹೈ' ಎನ್ನುವ ಅಕ್ಷರವನ್ನು ನಾಣ್ಯಗಳಲ್ಲಿ ಟಂಕಿಸಿ ಚಲಾವಣೆಗೆ ತಂದನು.[4] ಪ್ರಸ್ತುತ ಕಾಲದವರೆಗೂ ಬಂಗಾರದ ಮತ್ತು ತಾಮ್ರದ ನಾಣ್ಯಗಳೂ ದೊರೆತು ಪ್ರದರ್ಶನಗೊಂಡಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಹೈದರಾಲಿಯು ಆಳ್ವಿಕೆ ನಡೆಸಿದ ಸ್ಥಳಗಳಾದ ನಗರ ಮತ್ತು ಆರ್ಕಾವಿನಲ್ಲಿ ಆತನು ಟಂಕಿಸಿದ್ದ ಬೆಳ್ಳಿಯ ರೂಪಾಯಿಗಳು ಸಿಕ್ಕಿರುವುದನ್ನು ನೋಡಬಹುದಾಗಿದೆ[5] ಹಾಗೂ ಆನೆಯ ಚಿತ್ರವಿರುವುದನ್ನು ಅವನ ನಾಣ್ಯದಲ್ಲಿ ಕಾಣಬಹುದಾಗಿದೆ.[6]

**ಟಂಕಸಾಲೆಯ ಸ್ಥಳಗಳು**

**ನಗರ :**

ಹೈದರಾಲಿಯು ಕ್ರಿ.ಶ. 1763ರಲ್ಲಿ ಪ್ರಪ್ರಥಮವಾಗಿ ನಗರದಲ್ಲಿ (ಬಿದನೂರು) ಟಂಕಸಾಲೆಯನ್ನು ಪ್ರಾರಂಭಿಸಿದನು 'ಶ್ರೀ' ಎಂದು ಮುದ್ರಿಸುವ ಪದ್ಧತಿಯನ್ನು ನಿಲ್ಲಿಸಿದನು.[7] ಇಲ್ಲಿ 3.4 ಗ್ರಾಂಗಳ ತೂಕವಿರುವ ನಾಣ್ಯಗಳನ್ನು ಟಂಕಿಸಲಾಗಿದೆ. ಇವುಗಳು ಕೆಳದಿಯ ಅರಸ ಸದಾಶಿವನಾಯಕನ ನಾಣ್ಯಗಳ ಲಕ್ಷಣಗಳಂತೆ ಟಂಕಿಸಲಾಗಿತ್ತು. ನಾಣ್ಯಗಳ ಮುಮ್ಮುಖದಲ್ಲಿ ಶಿವಪಾರ್ವತಿಯ ಚಿತ್ರವಿರುವುದು ನಾಣ್ಯದ ಹಿಮ್ಮುಖದಲ್ಲಿ ಪರ್ಷಿಯನ್ ಭಾಷೆಯ 'ಹೈ' ಎಂಬ ಅಕ್ಷರವಿರುವುದು ಕಂಡು ಬಂದಿದೆ.[8]

**ಗುತ್ತಿಪಟ್ಟಣ:**

ಹೈದರನು ಗುತ್ತಿಪಟ್ಟಣದಲ್ಲಿ ಒಂದು ಟಂಕಸಾಲೆಯನ್ನು ಪ್ರಾರಂಭಿಸಿ ಇಲ್ಲಿ 3.4 ಗ್ರಾಂ ತೂಕವಿರುವ ನಾಣ್ಯವನ್ನು ಟಂಕಿಸಲಾಗಿದ್ದು ಇದನ್ನು ಹಿಜಿರಾ ವರ್ಷ 1196 ರಲ್ಲಿ ಮುದ್ರಿಸಿರುವುದು ತಿಳಿದು ಬಂದಿರುತ್ತದೆ.[9]

**ಪಟ್ಟಣ:**

ಪಟ್ಟಣದಲ್ಲಿ ಹೈದರನು ಒಂದು ಟಂಕಸಾಲೆಯನ್ನು ಸ್ಥಾಪಿಸಿದ್ದು, 1 ಪೈಸ ಎಂಬ ನಾಣ್ಯದ ತೂಕ 191.5 ಗ್ರೇನ್ ಹಾಗೂ ಮತ್ತೊಂದು ನಾಣ್ಯ 183.2 ಗ್ರೇನ್ ತೂಕದ ನಾಣ್ಯವು ಕಂಡು ಬಂದಿದ್ದು, ನಾಣ್ಯದ ಮುಮ್ಮುಖದಲ್ಲಿ ಆನೆಯು ಬಲಕ್ಕೆ ಚಲಿಸುತ್ತಿರುವ ಹಾಗೂ ಬಾಲವನ್ನು ಮೇಲೆತ್ತಿಕೊಂಡಿರುವ ದೃಶ್ಯ ಕಂಡು ಬಂದಿದ್ದು, ಹಿಮ್ಮುಖದಲ್ಲಿ ಹಿಜಿರಾ ವರ್ಷವನ್ನು 1195 ಎಂಬ ಸಂಖ್ಯೆಯನ್ನು ಮುದ್ರಿಸಲಾಗಿದೆ.[10]

**ಕ್ಯಾಲಿಕಟ್:**

ಕೇರಳದ ಕ್ಯಾಲಿಕಟ್‌ನಲ್ಲಿ ಕ್ರಿ.ಶ. 1773 ರಲ್ಲಿ ಟಂಕಸಾಲೆಯನ್ನು ಪ್ರಾರಂಭಿಸಿದ್ದನು.[11] ಇಲ್ಲಿ ಪಣಮ್ ಚಿನ್ನದ ನಾಣ್ಯವನ್ನು ಟಂಕಿಸಲಾಗುತ್ತಿತ್ತು.[12]

**ಬಳ್ಳಾರಿ:**

ಹೈದರಾಲಿ ಬಳ್ಳಾರಿಯಲ್ಲಿಯೂ ಸಹ ಒಂದು ಟಂಕಸಾಲೆಯನ್ನು ಸ್ಥಾಪಿಸಿದ್ದು, ಅಲ್ಲಿಯೂ ಸಹ ನಾಣ್ಯ ಟಂಕಿಸಲಾಗುತ್ತಿದ್ದು, 187.5 ಗ್ರೈನ್ಸ್‌ನ ತಾಮ್ರದ ನಾಣ್ಯವನ್ನು ತಯಾರಿಸಿದ್ದು, ಅದರ ಮುಮ್ಮುಖದಲ್ಲಿ ಆನೆಯು ಬಲಕ್ಕೆ ಮುಖಮಾಡಿ ಚಲಿಸುತ್ತಿದ್ದು, ಬಾಲವನ್ನು ಮೇಲೆತ್ತಿಕೊಂಡಿರುವ ದೃಶ್ಯವನ್ನು ನೋಡಬಹುದಾಗಿದೆ.[13]

**ಹೈದರಾಲಿಯ ಚಿನ್ನದ ನಾಣ್ಯಗಳು**

**ಪಗೋಡ:**

ಹೈದರಾಲಿಯ ಪಗೋಡ ಮೌಲ್ಯದ ಚಿನ್ನದ ನಾಣ್ಯದ ತೂಕ 51.5 ಗ್ರೈನ್ ತೂಕ ಇದ್ದು ಇದನ್ನು ಬಹಾದೂರಿ ಪಗೋಡ ಎಂದು ಕರೆಯಲಾಗುತ್ತಿತ್ತು. ಮುಮ್ಮುಖದಲ್ಲಿ ಕಣಯುತ್ತದ ಮೇಲ್ಭೈಯಲ್ಲಿ 'ಹೈ' ಎಂಬ ಪರ್ಷಿಯನ್ ಅಕ್ಷರವಿರುವುದು ಕಂಡು ಬಂದಿದೆ. ಹಾಗೂ ಹಿಮ್ಮುಖದಲ್ಲಿ ಕುಳಿತಿರುವ ಶಿವ ಮತ್ತು ಪಾರ್ವತಿ ಚಿತ್ರವಿದ್ದು, ಶಿವನ ಬಲಕೈಯಲ್ಲಿ ತ್ರಿಶೂಲ ಮತ್ತು ಎಡಗಡೆ ಜಿಂಕೆ ಚಿತ್ರವಿರುವುದು ಕಂಡು ಬಂದಿದೆ. ಮತ್ತೊಂದು 41 ಗ್ರೈನ್ಸ್ ಇರುವ 1194 ಎಂದು ದಿನಾಂಕವನ್ನು ಮುದ್ರಿಸಿರುವ ಮತ್ತೊಂದು ಪಗೋಡ ನಾಣ್ಯವು ಗುತ್ತಿಯ ಟಂಕಸಾಲೆಯಲ್ಲಿ ಮುದ್ರಿಸಿದ್ದು ಕಂಡುಬಂದಿದೆ. ಇದರ ಮುಮ್ಮುಖದಲ್ಲಿ ಹೆಚ್ಚು ಚುಕ್ಕೆಗಳಿಂದ ಕೂಡಿರುವುದು ಕಂಡು ಬಂದಿದೆ.[14]

**ಅರ್ಧ ಪಗೋಡ:**

ಹೈದರಾಲಿಯ ಅರ್ಧ ಪಗೋಡ ಕೂಡ ಒಂದು ನಾಣ್ಯ. ಇದರ ತೂಕ 26.5 ಗ್ರೇನ್ ತೂಕವಿದ್ದು ಅಗಲ 0.35′ ಇದೆ. ಮುಂಭಾಗದಲ್ಲಿ ಪರ್ಷಿಯನ್ ಭಾಷೆಯ 'ಹೈ' ಎಂಬ ಅಕ್ಷರವಿದ್ದು, ಹಿಂಭಾಗದಲ್ಲಿ ಶಿವಪಾರ್ವತಿಯರ ಚಿತ್ರವಿದ್ದು ಶಿವ ಬಲಗೈಯಲ್ಲಿ ತ್ರಿಶೂಲ ಹಿಡಿದಿರುವುದು ಪಾರ್ವತಿಯ ಎಡಭಾಗದಲ್ಲಿ ಜಿಂಕೆಯ ದೃಶ್ಯವಿರುವುದನ್ನು ನೋಡಬಹುದಾಗಿದೆ.

ಹೈದರಾಲಿಯ ಅರ್ಧಪಗೋಡ ಮತ್ತೊಂದು ನಾಣ್ಯ ತೂಕ 26 ಗ್ರೇನ್ ಆಗಿದ್ದು, ಮುಮ್ಮುಖದಲ್ಲಿ 'ಹೈ' ಎಂಬ ಪರ್ಷಿಯನ್ ಅಕ್ಷರವಿರುವುದು ಕಂಡು ಬಂದಿದೆ. ಹಿಮ್ಮುಖದಲ್ಲಿ ಕುಳಿತಿರುವ ವಿಷ್ಣುವಿನ ಚಿತ್ರವಿದ್ದು ಅವನ ಬಲಗೈಯಲ್ಲಿ, ಚಿತ್ರವಿರುವುದು ಹಾಗೂ ಎಡಕೈನಲ್ಲಿ ಶಂಖವಿರುವುದು ನೋಡಬಹುದಾಗಿದೆ.[15]

**ಪಣಮ್:**

ಹೈದರಾಲಿಯ ಪಣಮ್ ಮೌಲ್ಯದ ಒಂದು ಚಿನ್ನದ ನಾಣ್ಯ ತೂಕ 5.5 ಗ್ರೇನ್. ಇರುವುದು ಇದರ ಅಗಲ 0.2′ ಇದೆ ಇದರ ಮುಖ್ಯ ಲಕ್ಷಣವೆಂದರೆ ಮುಮ್ಮುಖ ಹಾಗೂ ಹಿಮ್ಮುಖಗಳೆರಡನ್ನು ವೀಕ್ಷಿಸಿದರೆ ಪಗೋಡ ಮೌಲ್ಯದ ನಾಣ್ಯಗಳನ್ನು ಹೋಲುತ್ತದೆ. ಮುಮ್ಮುಖದಲ್ಲಿ 'ಹೈ' ಎಂಬ ಪರ್ಷಿಯನ್ ಅಕ್ಷರವಿರುವುದು ಕಂಡು ಬಂದಿರುತ್ತದೆ. ನಾಣ್ಯದ ಹಿಮ್ಮುಖದಲ್ಲಿ ಶಿವ ಕುಳಿತಿರುವ ದೃಶ್ಯ ಎಡಭಾಗದಲ್ಲಿ ಪಾರ್ವತಿ ಇರುವುದು ಹಾಗೂ ಜಿಂಕೆ ದೃಶ್ಯವಿರುವುದು ನೋಡಬಹುದಾಗಿದೆ.[16]

ಕೆಲವು ಪಣಮ್ ಚಿನ್ನದ ನಾಣ್ಯಕ್ಕೆ ಹೆಸರಿರುವುದಿಲ್ಲ. ಆದರೆ ಅವುಗಳಲ್ಲಿ ಹಿಜರಿ ವರ್ಷವನ್ನು ಟಂಕಿಸಿರುವುದನ್ನು ನೋಡಬಹುದು. ಹಾಗೂ ವೃತ್ತಾಕಾರದಲ್ಲಿ ಸುಂದರವಾಗಿ ಟಂಕಿಸಲಾಗಿದೆ. 27 ಗ್ರೇನ್ ತೂಕವಿರುವ ನಾಣ್ಯದಲ್ಲಿ ಮುಮುಖದಲ್ಲಿ ಹೈದರಾಲಿಯ 'ಹೈ' ಎಂಬ ಪರ್ಷಿಯನ್ ಅಕ್ಷರವಿದೆ ಹಿಮ್ಮುಖದಲ್ಲಿ 1189 ಎಂಬ ದಿನಾಂಕವನ್ನು ಮುದ್ರಿಸಿರುವುದು ಕಂಡುಬಂದಿದೆ.[17]

**ತಾಮ್ರದ ನಾಣ್ಯಗಳು:**

**ಪೈಸೆ:**

ಹೈದರ್ ಆಲಿ ಒಂದು ಪೈಸೆ ಎಂಬ ಚಿನ್ನದ 191.5 ಗ್ರೇನ್ ಇರುವ ತೂಕದ ನಾಣ್ಯವನ್ನು ಟಂಕಿಸಿದ್ದು ಇದರ ಮುಮ್ಮುಖದಲ್ಲಿ ಒಂದು ಆನೆಯು ಬಲಭಾಗಕ್ಕೆ ಹೋಗುತ್ತಿರುವುದು ಹಾಗೂ ಬಾಲವನ್ನು ಮೇಲೆತ್ತಿಕೊಂಡಿರುವ ದೃಶ್ಯವನ್ನು ಮುದ್ರಿಸಲಾಗಿದೆ ಮತ್ತು ಹಿಮ್ಮುಖದಲ್ಲಿ ದಿನಾಂಕವನ್ನು ಮುದ್ರಿಸಲಾಗಿದೆ.[18]

187 ಗ್ರೇನ್ ಇರುವ ಮತ್ತೊಂದು ಒಂದು ಪೈಸ ಎಂಬ ಚಿನ್ನದ ನಾಣ್ಯವನ್ನು ಟಂಕಿಸಲಾಗಿದ್ದು ನಾಣ್ಯದ ಮುಮ್ಮುಖದಲ್ಲಿ ಆನೆಯು ಬಲಭಾಗದಿಂದ ಚಲಿಸುತ್ತಿರುವ ದೃಶ್ಯ ಕಂಡುಬಂದಿದ್ದು, ಹಿಮ್ಮುಖದಲ್ಲಿ ದಿನಾಂಕವನ್ನು ಮುದ್ರಿಸಲಾಗಿದೆ.

**ಅರ್ಧಪೈಸ:**

93.5 ಗ್ರೈನ್ ಇರುವ ಒಂದು ಅರ್ಧ ಪೈಸೆಯ ತಾಮ್ರದ ನಾಣ್ಯದ ಮುಮ್ಮುಖದಲ್ಲಿ ಹುಲಿಯ ಚಿತ್ರವಿದ್ದು, ಹುಲಿ ಬಲಭಾಗಕ್ಕೆ ನಿಂತಿದ್ದು ಮುಖವನ್ನು ನೋಡುಗರ ಕಡೆ ತಿರುಗಿಸಿದ್ದು ಬಾಲವನ್ನು ಮೇಲೆತ್ತಿಕೊಂಡಿದೆ ಹಾಗೂ ಸುತ್ತಲೂ ಎರಡು ವೃತ್ತಾಕಾರದ ಗೆರೆಗಳಿದ್ದು ಗೆರೆಗಳ ಒಳಗೆ ಚುಕ್ಕೆಗಳು ಇರುವುದು ಕಂಡು ಬಂದಿದೆ. ಹಿಮ್ಮುಖದಲ್ಲಿ ಆಯುಧ ಚಿತ್ರವಿದ್ದು, ಸುತ್ತಲೂ 2 ವೃತ್ತಗಳ ಗೆರೆಗಳಿದ್ದು 2 ಗೆರೆಗಳ ಒಳಗೆ ಚುಕ್ಕಿಗಳು ಇರುವ ಹಾಗೆ ಮುದ್ರಿಸಲಾಗಿದೆ.[19]

**ಕಾಲು ಪೈಸ:**

39.0 ಗ್ರೈನ್ಸ್ ಇರುವ ಕಾಲು ಪೈಸೆಯ ತಾಮ್ರದ ನಾಣ್ಯದಲ್ಲಿ ಮುಮ್ಮುಖ ಭಾಗದಲ್ಲಿ ಹುಲಿಯ ಚಿತ್ರವಿದ್ದು, ಬಲಭಾಗಕ್ಕೆ ನಿಂತಿರುವುದು ತನ್ನ ಮುಖವನ್ನು ನೋಡುಗರ ಕಡೆಗೆ ತಿರುಗಿಸಿದ್ದು ಬಾಲವನ್ನು ಮೇಲಕ್ಕೆ ಎತ್ತಿಕೊಂಡಿದೆ. ಸುತ್ತಲೂ 2 ವೃತ್ತಾಕಾರದ ಗೆರೆಗಳಿದ್ದು ಮಧ್ಯ ಚುಕ್ಕೆಗಳಿರುವುದು. ಹಿಮ್ಮುಖದಲ್ಲಿ ಆಯುಧ ಚಿತ್ರವಿದ್ದು ಅದರ ಸುತ್ತಲೂ ಎರಡು ವೃತ್ತಾಕಾರದ ಗೆರೆಗಳಿದ್ದು ಎರಡು ಗೆರೆಗಳ ಮಧ್ಯದಲ್ಲಿ ಚುಕ್ಕಿಗಳಿರುವ ಹಾಗೆ ಮುದ್ರಿಸಿರುವುದು ತಿಳಿದು ಬಂದಿದೆ.

43.5 ಗ್ರೈನ್ಸ್ ಇರುವ ಕಾಲು ಪೈಸೆಯ ತಾಮ್ರದ ನಾಣ್ಯದ ಮುಮ್ಮುಖ ಭಾಗದಲ್ಲಿ ಹುಲಿಯ ಚಿತ್ರವಿದ್ದು ಬಲಭಾಗಕ್ಕೆ ನಿಂತಿರುವುದು ತನ್ನ ಮುಖವನ್ನು ನೋಡುಗರ ಕಡೆ ತಿರುಗಿಸಿದ್ದು ಬಾಲವನ್ನು ಮೇಲಕ್ಕೆ ಎತ್ತಿಕೊಂಡಿದೆಲ. ಸುತ್ತಲೂ 2 ವೃತ್ತಾಕಾರದ ಗೆರೆಗಳಿದ್ದು, ಮಧ್ಯ ಚುಕ್ಕೆಗಳಿರುವುದು ಹಿಮ್ಮುಖದಲ್ಲಿ ಆಯುಧ ಚಿತ್ರವಿದ್ದು ಅದರ ಸುತ್ತಲೂ ಎರಡು ವೃತ್ತಾಕಾರದ ಗೆರೆಗಳಿದ್ದು, ಈ ಗೆರೆಗಳ ಮಧ್ಯದಲ್ಲಿ ಚುಕ್ಕೆಗಳಿರುವ ಹಾಗೆ ಮುದ್ರಿಸಿದೆ. ಆದರೆ ಕೆಲವು ಒಂದು ನಾಣ್ಯಗಳಲ್ಲಿ ಹಿಮ್ಮುಖದ ದೃಶ್ಯಗಳಲ್ಲಿ ಆಯುಧ ಪ್ರಮುಖ ಬಲಭಾಗಕ್ಕೆ ಇರುವುದು ಕಂಡುಬಂದಿದೆ.[20]

**1/8 ಪೈಸೆ (Eigth Paise):**

11.2 ಗ್ರೈನ್ಸ್ ಇರುವ ತಾಮ್ರದ ನಾಣ್ಯವು ದೊರೆದಿದ್ದು, ಮಮ್ಮುಖಭಾಗದಲ್ಲಿ ಹುಲಿಯ ಚಿತ್ರವಿದ್ದು, ಅದು ಬಲಭಾಗಕ್ಕೆ ನಿಂತಿದ್ದು, ಮುಖವನ್ನು ನಾಣ್ಯ ವೀಕ್ಷಕರ ನೋಡುಗರ ಕಡೆ ತಿರುಗುವುದು ಕಂಡು ಬಂದಿದೆ. ಹಾಗೂ ಬಾಲವನ್ನು ಮೇಲಕ್ಕೆ ಎತ್ತಿಕೊಂಡಿದೆ. ಹಿಮ್ಮುಖದಲ್ಲಿ ಆಯುಧದ ಮುಖಭಾಗವು ಬಲಭಾಗಕ್ಕೆ

ಮುದ್ರಿಸಿರುವುದು ಕಂಡು ಬಂದು ಆಯುಧದ ಸುತ್ತಲೂ ಎರಡು ವೃತ್ತಾಕಾರದ ಗೆರೆಗಳಿದ್ದು ಎರಡು ವೃತ್ತಾಕಾರದ ಗೆರೆಗಳ ಮಧ್ಯೆ ಚುಕ್ಕೆಗಳು ಇರುವುದನ್ನು ಮುದ್ರಿಸಲಾಗಿದೆ.[21]

ಮೇಲ್ಕಂಡ ವಿವಿಧ ಬಗೆಯ ನಾಣ್ಯಗಳನ್ನು ಹೈದರಾಲಿಯು ಮುದ್ರಿಸಿ ಬಲಾವಣೆಗೆ ತಂದನು. ಈತನು ಹಿಂದೂ ನಾಣ್ಯ ಪದ್ಧತಿಯನ್ನೇ ಬಹುತೇಕವಾಗಿ ಅನುಸರಿಸಿದನು.

**4.2 ಟಿಪ್ಪುವಿನ ನಾಣ್ಯ ವ್ಯವಸ್ಥೆ:**

ಟಿಪ್ಪು ಸುಲ್ತಾನ್ ತನ್ನ ತಂದೆಗಿಂತ ಟಿಪ್ಪು ಕೈಗಾರಿಕೆಗಳಿಗೆ ಪ್ರಾಮುಖ್ಯತೆಯನ್ನು ನೀಡಿದ ಹಾಗೆಯೇ ನಾಣ್ಯ ತಯಾರಿಕಾ ಉದ್ಯಮಕ್ಕೆ ಪ್ರೋತ್ಸಾಹಿಸಿದನು. ತನ್ನ ಆಳ್ವಿಕೆಯ ಕಾಲ ಕ್ರಿ.ಶ. 1782 ರಿಂದ ಕ್ರಿ.ಶ. 1799ರವರೆಗಿನ ಅವಧಿಯಲ್ಲಿ ತಾನು ಗೆದ್ದ ಪ್ರದೇಶಗಳಲ್ಲಿ ಟಂಕ ಸಾಲೆಗಳನ್ನು ಸ್ಥಾಪಿಸಿ ವಿವಿಧ ಬಗೆಯ ನಾಣ್ಯಗಳನ್ನು ಟಂಕಿಸಿದನು. ಇವುಗಳು ನೋಡಲು ಸುಂದರವಾಗಿದ್ದವು. ಪರ್ಷಿಯನ್ ಭಾಷೆಯ ಸುಂದರ ಲಿಖಿತವಿರುತ್ತಿತ್ತು. ಹಾಗೂ ನಾಣ್ಯಗಳಲ್ಲಿ ತಾರೀಖುಗಳಿರುವ ಚಿನ್ನ, ಬೆಳ್ಳಿ ತಾಮ್ರದ ಲೋಹಗಳಿಂದ ಅಚ್ಚು ಹಾಕಿಸಲಾಗಿದ್ದು, 19 ಸ್ಥಳಗಳಲ್ಲಿ ಟಂಕಸಾಲೆಗಳನ್ನು ಸ್ಥಾಪಿಸಿ ತನ್ನ ತಂದೆಗಿಂತ ಹೆಚ್ಚಿನ ನಾಣ್ಯಗಳನ್ನು ಟಂಕಿಸಲಾಗಿದೆ ಎಂದು ಗುರುತಿಸಲಾಗಿದೆ. ಈತನು ನಾಣ್ಯ ಮುದ್ರಣದಲ್ಲಿ ಪರ್ಷಿಯನ್ ಭಾಷೆ ಮತ್ತು ಮಾದರಿಯನ್ನು ಅನುಸರಿಸಿದನು.[22]

**ಟಿಪ್ಪು ಸುಲ್ತಾನನ ಟಂಕಸಾಲೆಯ ಸ್ಥಳಗಳು:**

**ಪಟ್ಟಣ ಅಥವಾ ಶ್ರೀರಂಗಪಟ್ಟಣ :**

ಚಿನ್ನ ಬೆಳ್ಳಿ ನಾಣ್ಯಗಳನ್ನು ಟಿಪ್ಪು ತನ್ನ ಪಟ್ಟಾಭಿಷೇಕದ ಪ್ರಾರಂಭದ ವರ್ಷದಿಂದ ನಾಣ್ಯಗಳನ್ನು ಅಚ್ಚುಹಾಕಿಸಿದನು (ಕೊನೆ ವರ್ಷದ ಆಳ್ವಿಕೆಯನ್ನು ಬಿಟ್ಟು)[23]

**ನಜರ್‌ಬಾದ್ ಅಥವಾ ಮೈಸೂರು :**

ನಜರ್‌ಬಾದ್‌ನಲ್ಲಿದ್ದ ಹಳೆಯ ಕೋಟೆಯನ್ನು ನಾಶಪಡಿಸಿ, ಕ್ರಿ.ಶ, 1787 ರಲ್ಲಿ ಹೊಸ ಕೋಟೆಯನ್ನು ನಿರ್ಮಿಸಿ ಅಲ್ಲಿ ಹೊಸದಾಗಿ ಟಂಕಸಾಲೆಯನ್ನು ಸ್ಥಾಪಿಸಿದನು. ಈ ಪ್ರದೇಶಕ್ಕೆ ತನಗೆ ಇಷ್ಟವಾದ ನಜರ್‌ಬಾದ್ ಎಂಬ ಹೆಸರನ್ನು ನೀಡಿದನು. ಇಲ್ಲಿ ಕೇವಲ ತಾಮ್ರದ ನಾಣ್ಯಗಳನ್ನು ಟಿಪ್ಪು ಟಂಕಿಸುತ್ತಿದ್ದು ಅವುಗಳಲ್ಲಿ ಅರ್ಧ ಪೈಸ, ಕಾಲು ಪೈಸ ಎಂಬ ನಾಣ್ಯಗಳೂ ಕಂಡುಬಂದಿವೆ.

**ನಗರ ಅಥವಾ ಬಿದನೂರು:**

ಈ ಪ್ರದೇಶಗಳಲ್ಲಿ ಪಣಂ ಎರಡು ರೂಪಾಯಿನ ನಾಣ್ಯ ರೂಪಾಯಿ, ಅರ್ಧರೂಪಾಯಿ, ಎರಡು ಪೈಸೆಯ ನಾಣ್ಯ ಪಣಂ ನಾಣ್ಯಗಳನ್ನು ಟಂಕಿಸಲಾಗುತ್ತಿತ್ತು.[24]

**ಬೆಂಗಳೂರು :**

ಬೆಂಗಳೂರು ಪ್ರದೇಶದಲ್ಲಿ ತಾಮ್ರದ ನಾಣ್ಯಗಳಾದ 'ಕುತ್ಬ್' ಎಂಬ ಹೆಸರಿನಲ್ಲಿ ಎಂಟನೆಯ ಒಂದು ಪೈಸೆಯ ನಾಣ್ಯ ತಯಾರಿಸಲಾಗುತ್ತಿದ್ದು ಕ್ರಿ.ಶ 1791ರ ನಂತರ ಟಂಕಿಸುವುದನ್ನು ಇಲ್ಲಿ ನಿಲ್ಲಿಸಲಾಯಿತು.[25]

**ಧಾರವಾಡ :**

ಧಾರವಾಡ ಪ್ರದೇಶದಲ್ಲಿ ಟಂಕಸಾಲೆಯನ್ನು ಸ್ಥಾಪಿಸಲಾಗಿತ್ತು.[26] ಈ ಪ್ರದೇಶದಲ್ಲಿ ಚಿನ್ನದ ಲೋಹದಲ್ಲಿ ಪಣಂ, ಪಗೋಡ ಎಂದು, ಬೆಳ್ಳಿಯ ಲೋಹದಲ್ಲಿ ರೂಪಾಯಿ ಎಂದು, ತಾಮ್ರದ ಲೋಹದಲ್ಲಿ ಪೈಸ ಎಂಬ ಹೆಸರಿನಿಂದ ನಾಣ್ಯಗಳನ್ನು ಟಂಕಿಸಿ ಚಲಾವಣೆಗೆ ತರಲಾಗುತ್ತಿತ್ತು.[27]

**ಚಿತ್ರದುರ್ಗ :**

ಚಿತ್ರದುರ್ಗದಲ್ಲಿದ್ದ ಟಂಕಸಾಲೆಗೆ ಟಿಪ್ಪು ಸುಲ್ತಾನ್ 'ಫರುಕ್ ಯಾಬ್ ಹಿಸಾರ್' ಎಂಬ ಹೆಸರನ್ನು ನೀಡಿ, ಇಲ್ಲಿ ಕೇವಲ ತಾಮ್ರದ ನಾಣ್ಯಗಳಾದ ಎರಡು ಪೈಸ ನಾಣ್ಯದಿಂದ ಆರಂಭವಾಗಿ ಎಂಟನೆಯ ಒಂದು ಭಾಗದ ಪೈಸೆವರೆಗೆ ಟಂಕಿಸಲಾಗುತ್ತಿದ್ದು, ಈ ನಾಣ್ಯಗಳು ಕ್ರಿ.ಶ. 1787 ರಿಂದ ಕ್ರಿ.ಶ. 1791ರ ವರೆಗೆ ಟಂಕಿಸಲಾದ ನಾಣ್ಯಗಳು ಎಂದು ಕಂಡುಬಂದಿರುತ್ತದೆ.[28]

**ಆಂಧ್ರಪ್ರದೇಶ ಗುತ್ತಿ :**

ಆಂಧ್ರಪ್ರದೇಶಕ್ಕೆ ಸೇರಿದ ಅನಂತಪುರ ಜಿಲ್ಲೆಯ ಗುತ್ತಿ ಪ್ರದೇಶದಲ್ಲಿ ಪೈಸೆ ಹಿಸಾರ್ ಎಂಬ ಹೆಸರನ್ನು ಟಿಪ್ಪು ಕೊಟ್ಟು ಪೈಸ, ಅರ್ಧ ಪೈಸ ಮತ್ತು ಕಾಲು ಪೈಸ ನಾಣ್ಯಗಳನ್ನು ಇಲ್ಲಿನ ಟಂಕಸಾಲೆಯಲ್ಲಿ ಅಚ್ಚು ಹಾಕಿಸಿದನು.

**ಗುರ್ರಂಕೊಂಡ :**

ಇದು ಆಂಧ್ರಪ್ರದೇಶದ ಕಡಪ ಜಿಲ್ಲೆಯಲ್ಲಿದ್ದು ಜಫಾರ್‌ಖಾದ್ ಎಂಬ ಹೆಸರಿನಲ್ಲಿ ಟಂಕಸಾಲೆ ಇತ್ತು. ಇದು ತಾಮ್ರದ ಪೈಸ, ಅರ್ಧ ಪೈಸ ಮತ್ತು ಕಾಲು ಪೈಸ ನಾಣ್ಯಗಳನ್ನು ಇಲ್ಲಿನ ಟಂಕಸಾಲೆಯಲ್ಲಿ ಮುದ್ರಿಸಲಾಗುತ್ತಿತ್ತು.

**ದಿಂಡಿಗಲ್ :**

ತಮಿಳುನಾಡು ಪ್ರದೇಶದ ದಿಂಡಿಗಲ್‌ನಲ್ಲಿ ಒಂದು ಟಂಕಸಾಲೆಯನ್ನು ಸ್ಥಾಪಿಸಿ ಇದನ್ನು ಟಿಪ್ಪು 'ಕಾಲಿಕಾಬಾದ್' ಎಂಬ ಹೆಸರನ್ನು ನೀಡಿದ್ದನು. ಕಾಲಿಕಾಬಾದ್ ಎಂದರೆ ದೇವರನಗರ ಎಂಬ ಅರ್ಥವನ್ನು ನೀಡಲಾಗಿತ್ತು. ಇಲ್ಲಿ ಚಿನ್ನದ ಪಣ ತಾಮ್ರದ ಪೈಸ ಮತ್ತು ಕಾಲು ಪೈಸೆಯ ನಾಣ್ಯಗಳನ್ನು ಕ್ರಿ.ಶ. 1787 ರಿಂದ ಕ್ರಿ.ಶ. 1790ರ ವರೆಗೆ ಟಂಕಿಸಲಾಗಿದೆ ಎಂದು ತಿಳಿಯಬಹುದಾಗಿದೆ.[29]

**ಸಲಾಮಾಬಾದ್ :**

ಇದು ತಮಿಳುನಾಡಿನ ಸತ್ಯಮಂಗಲದ ಸಲಾಮಾಬಾದ್‌ನಲ್ಲಿ ಟಂಕಸಾಲೆಯನ್ನು ಸ್ಥಾಪಿಸಿ ಇಲ್ಲಿ ತಾಮ್ರದ ಪೈಸ, ಅರ್ಧ ಪೈಸ, ಕಾಲು ಪೈಸ ಮತ್ತು ಎಂಟನೆಯ ಒಂದು ಪೈಸೆಯ ನಾಣ್ಯಗಳನ್ನು ಮಾತ್ರ ಅಚ್ಚು ಹಾಕಲಾಗುತ್ತಿದ್ದು, ಈ ನಾಣ್ಯಗಳು ಅತೀ ವಿರಳವಾಗಿ ಟಂಕಿಸಲಾಗಿದೆ.[30]

**ಫಿರೋಕ್ :**

ಕಲ್ಲಿಕೋಟೆಯ 7 ಮೈಲಿ ದೂರದಲ್ಲಿನ ಫಿರೋಕ್‌ನಲ್ಲಿ ಒಂದು ಟಂಕಸಾಲೆಯನ್ನು ಸ್ಥಾಪಿಸಿ ಇದಕ್ಕೆ ಫರೋಕಿ ಎಂಬ ಹೆಸರನ್ನು ನೀಡಿ ಏಳಿಗೆಯ ನಗರ ಎಂಬ ಅರ್ಥವನ್ನು ನೀಡಲಾಗಿ ಇಲ್ಲಿ ಚಿನ್ನದ ಪಣ ನಾಣ್ಯ, ತಾಮ್ರದ ಎರಡು ಪೈಸ, ಅರ್ಧ ಪೈಸ, ಕಾಲು ಪೈಸ ನಾಣ್ಯಗಳನ್ನು ಟಂಕಿಸಲಾಗುತ್ತಿತ್ತು. ಇಲ್ಲಿ ಟಂಕಿಸಲಾದ ನಾಣ್ಯಗಳು ಕ್ರಿ.ಶ. 1788 ರಿಂದ ಕ್ರಿ.ಶ. 1790ರ ವರೆಗಿನ ವರ್ಷದವು ಎಂದು ಗುರುತಿಸಲಾಗಿದೆ.[31]

**ಕಲ್ಲಿಕೋಟೆ :**

ಕೇರಳದ ಕಲ್ಲಿಕೋಟೆಯಲ್ಲಿ ಒಂದು ಟಂಕ ಸಾಲೆಯನ್ನು ಟಿಪ್ಪು ಸ್ಥಾಪಿಸಿದ್ದು, ಈ ಟಂಕ ಶಾಲೆಯಲ್ಲಿ ಚಿನ್ನ, ಬೆಳ್ಳಿ, ತಾಮ್ರ ಈ ಮೂರು ಲೋಹದ ನಾಣ್ಯಗಳನ್ನು ತಯಾರಿಸಲಾಗಿದೆ.[32]

**ಹೊಳೆ ಹೊನ್ನೂರು :**

ಮೂರ್ ಎಂಬ ಇತಿಹಾಸಕಾರನ ಪ್ರಕಾರ ಶಿವಮೊಗ್ಗ ಜಿಲ್ಲೆಯ ಹೊಳೆಹೊನ್ನೂರು ಬೇನಜೀರ್ ಎಂಬ ಹೆಸರಿನಿಂದ ಒಂದು ಟಂಕಸಾಲೆಯನ್ನು ಟಿಪ್ಪು ಸ್ಥಾಪಿಸಿದ್ದನ್ನು ಎಂದು ಹೇಳಿದ್ದಾನೆ.

**ಸಕ್ಕರೆ ಪಟ್ಟಣ :**

ಡಾ. ಸಿದ್ದಿಕ್‌ರವರು ಚಿಕ್ಕಮಗಳೂರು ಜಿಲ್ಲೆಯ ಸಕರಾಯಪಟ್ಟಣದಲ್ಲಿ ಟಿಪ್ಪುವಿನ ಒಂದು ಟಂಕಸಾಲೆ ಇತ್ತು ಎಂದು ಹೇಳಿದ್ದಾರೆ.

**ಸತಾರ :**

ಮಹಾರಾಷ್ಟ್ರದ ಸತಾರ್ ಎಂಬಲ್ಲಿ ಒಂದು ಟಿಪ್ಪುವಿನ ಟಂಕಸಾಲೆ ಇತ್ತು ಎಂದು ಡಾ. ಸಿದ್ದಿಕ್ ಹೇಳಿದ್ದಾರೆ.

**ಅಬ್ಬೂರು :**

ಚಿತ್ರದುರ್ಗ ಜಿಲ್ಲೆಯ ಅಬ್ಬೂರಿನಲ್ಲಿ ಟಿಪ್ಪುವಿನ ಟಂಕಸಾಲೆ ಇತ್ತು ಎಂದು ಡಾ. ಸಿದ್ದಿಕ್ ಹೇಳಿದ್ದಾರೆ.

**ಗಂಜಿಕೋಟೆ :**

ಆಂಧ್ರಪ್ರದೇಶದ ಗಂಜಿಕೋಟೆಯಲ್ಲಿ ಟಿಪ್ಪು ಒಂದು ಟಂಕಸಾಲೆಯನ್ನು ಸ್ಥಾಪಿಸಿದ್ದನು. ಇಲ್ಲಿ ಟಂಕಿಸಿದಂತಹ ತಾಮ್ರದ ನಾಣ್ಯದ ಮೇಲೆ ಟಂಕಸಾಲೆಯ ಹೆಸರಾದ ಗಂಜಿಕೋಟೆ ಮುದ್ರಿಸಿರುವುದು ಬೆಳಕಿಗೆ ಬಂದಿದೆ.

**ಕಲೂರ್ :**

ಚಿತ್ರದುರ್ಗದ ಕಲೂರ್‌ನಲ್ಲಿ ಒಂದು ಟಂಕಸಾಲೆ ಹಾಗೆಯೇ ಟಿ.ನರಸೀಪುರದ ಕಲೂರ್‌ನಲ್ಲಿ ಮತ್ತೊಂದು ಟಂಕಸಾಲೆಯನ್ನು ಟಿಪ್ಪು ಸ್ಥಾಪಿಸಿದ್ದನು.

**ಬೇಕಲ್ ಕೋಟೆ :**

ಕೇರಳದ ಬೇಕಲ್ದ ಬೇಕಲ್ ಕೋಟೆಯಲ್ಲಿ ಟಿಪ್ಪು ಒಂದು ಟಂಕಸಾಲೆಯನ್ನು ಸ್ಥಾಪಿಸಿದ್ದನು. ಒಂದು ಡಾ. ಟಿ. ಸತ್ಯಮೂರ್ತಿ ತಮ್ಮ ಟಿಪ್ಪುವಿನ ನಾಣ್ಯಗಳು ಎಂಬ ಪ್ರಕಟಣೆಯಲ್ಲಿ ತಿಳಿಸಿದ್ದಾರೆ.[33]

**ಟಿಪ್ಪು ನಾಣ್ಯಗಳ ಕಾಲಮಾನ:**

ಟಿಪ್ಪು ತನ್ನ ಟಂಕಸಾಲೆಯಲ್ಲಿ ಅಚ್ಚು ಮಾಡಲಾಗುತ್ತಿದ್ದ ನಾಣ್ಯಗಳಲ್ಲಿ ಕಾಲಮಾನವನ್ನು ಅಳವಡಿಸಿಕೊಂಡಿದ್ದನು. ಟಿಪ್ಪು ತನ್ನ ಆಡಳಿತದ ಅಧಿಕಾರದ ಮೊದಲ ನಾಲ್ಕು ವರ್ಷಗಳಲ್ಲಿ ಅಂದರೆ 1197 ರಿಂದ 1200ರ ವರೆಗೆ ಹಿಜಿರಕಾಲವನ್ನು ಅಳವಡಿಸಿಕೊಂಡು ನಾಣ್ಯಗಳನ್ನು ಮುದ್ರಿಸಿದನು. ನಂತರ ತನ್ನ ಆಳ್ವಿಕೆಯ 5ನೇ ವರ್ಷದಿಂದ ಹಿಜಿರಶಕೆಯ ಬದಲು ಮೌಲೂದಿ ಶಕೆಯನ್ನು ಅಂದರೆ 1215 ಎಂದು ಪ್ರಾರಂಭಿಸಿದನು. ಹಾಗೂ ಈತನ ಆಳ್ವಿಕೆ ಅಂತಿಮ ಘಟದ ಕೊನೆಯ ವರ್ಷದ ನಾಣ್ಯದ ಮೇಲೆ 1277 ಎಂಬ ಮೌಲೂದಿ ವರ್ಷವನ್ನು ಮುದ್ರಿಸಲಾಗಿದೆ. ಮೌಲೂದಿ ವರ್ಷದಲ್ಲಿ ಟಿಪ್ಪು ಒಂದು ವರ್ಷವನ್ನು 12 ತಿಂಗಳುಗಳಿದ್ದು, 12 ತಿಂಗಳನ್ನು 2 ರೀತಿಯಾಗಿ ಬಳಸುತ್ತಿದ್ದು ಮೊದಲನೆಯದಾಗಿ 'ಅಜ್ಜದ್ ಪದ್ಧತಿ' ಎಂದು ಟಿಪ್ಪುವಿನ ಪ್ರಾರಂಭದ ನಾಲ್ಕು ವರ್ಷಗಳಲ್ಲಿ ಬಳಸಲಾಗಿದ್ದು ಹಾಗೆಯೇ ಎರಡನೆಯ ಪದ್ಧತಿಯಾದ 'ಅಬ್ತತ್ ಪದ್ಧತಿ'ಯನ್ನು 5ನೇ ವರ್ಷದಲ್ಲಿ ಬಳಕೆ

ತಂದನು. ಟಿಪ್ಪು ತನ್ನ ಆಡಳಿತದಲ್ಲಿ ವರ್ಷಗಳಿಗೆ ಕೊಟ್ಟ ಕಾಲಮಾನದ ವರ್ಷ. ಕಾಲಮಾನದ ಹೆಸರು ಮತ್ತು ಹೆಸರು ಯಾವ ಅರ್ಥವನ್ನು ತಿಳಿಸುತ್ತದೆ ಎಂಬುದನ್ನು ಈ ಕೆಳಗೆ ತೋರಿಸಲಾಗಿದೆ.[34]

| ಟಿಪ್ಪುವಿನ ಆಳ್ವಿಕೆಯ ವರ್ಷ | ಕಾಲಮಾನದ ವರ್ಷ | ಕಾಲಮಾನದ ಹೆಸರು | ಕಾಲಮಾನದ ಹೆಸರಿನ ಅರ್ಥ |
|---|---|---|---|
| 1 | 37 | ಜಕಿ | ಶುದ್ದ |
| 2 | 38 | ಅಜಲ್ | ಶಾಶ್ವತ |
| 3 | 39 | ಜಲನ್ | ಉಜ್ವಲ |
| 4 | 40 | ದಲ್ವ್ | ಕುಂಭರಾಶಿ |
| 5 | 41 | ಷಾ | ದೊರೆ |
| 6 | 42 | ಸಾರಾ | ಸುವಾಸನೆ |
| 7 | 43 | ಸರಾಬ್ | ಮರೀಚಿಕೆ |
| 8 | 44 | ಶಿತಾ | ಶಿಶಿರ |
| 9 | 45 | ಜಬರ್‌ಜದ್ | ಗೋಮೇಧಿಕ |
| 10 | 46 | ಸಹರ | ಉದಯ |
| 11 | 47 | ಸಾಹರ್ | ಮಂತ್ರವಾದಿ |
| 12 | 48 | ರಾಸಿಖಾ | ಸ್ಥಿರ |
| 13 | 49 | ಷಾದ | ಸಂತೋಷ |
| 14 | 50 | ಹಿರಾಸತ್ | ರಕ್ಷಣೆ |
| 15 | 51 | ಸಾಜ್ | ಹೊಂದಾಣಿಕೆ |
| 16 | 52 | ಷಾದಾಬ್ | ತೇವ |
| 17 | 53 | ಬಾರಿಷ್ | ಮಳೆ |

**ಚಿನ್ನದ ನಾಣ್ಯಗಳು :**

ಟಿಪ್ಪು ಸುಲ್ತಾನ್ 4 ರೀತಿಯ ಚಿನ್ನದ ನಾಣ್ಯಗಳನ್ನು ಟಂಕಿಸಿ ಅವುಗಳಿಗೆ ಹೆಸರನ್ನು ನೀಡಿದ್ದನು.

**ಟಿಪ್ಪುವಿನ ಚಿನ್ನದ ನಾಣ್ಯಗಳು**

ಚಿನ್ನದ ನಾಣ್ಯ 4 ರೀತಿಯಲ್ಲಿ ಇದ್ದವು ಅವುಗಳೆಂದರೆ, ಅಹ್ಮದಿ, ಸಾಧಿಕಿ, ಫರೂಕಿ, ಪಣ.

**ಅಹ್ಮದಿ:**

ಇದು ನಾಲ್ಕು ಪಗೋಡ ಮೌಲ್ಯದ ಚಿನ್ನದ ನಾಣ್ಯವಾಗಿತ್ತು, ಇದನ್ನು ಟಿಪ್ಪು ಪ್ರವಾದಿಯ ಗೌರವಾರ್ಥವಾಗಿ ಪ್ರವಾದಿ ಹೆಸರನ್ನು ಈ ನಾಣ್ಯಕ್ಕೆ ಇರಿಸಿದ್ದನು.[35] ಒಂದು ಚಿನ್ನದ ಅಹ್ಮದಿ ನಾಣ್ಯ 13.6 ಗ್ರೈನ್ಸ್ ಇದನ್ನು ಶ್ರೀರಂಗಪಟ್ಟಣ ಮತ್ತು ನಗರ ಸ್ಥಳದಲ್ಲಿ ಕ್ರಿ.ಶ. 1783, 1784, 1787, 1788, 1789 ಮತ್ತು 1790 ಇವುಗಳನ್ನು ಮುದ್ರಿಸಲಾಗಿದೆ. ಹಾಗೂ ನಗರ ಸ್ಥಳ ಕ್ರಿ.ಶ. 1788 ರಲ್ಲಿ 13.6 ಗ್ರೈನ್ಸ್ ತೂಕದ ಅಹ್ಮದಿ ನಾಣ್ಯವನ್ನು ಟಂಕಿಸಲಾಗಿದೆ. ಇವುಗಳು ವೃತ್ತಾಕಾರದಲ್ಲಿ ಇದ್ದವು ಹಾಗೂ ಅದರೊಳಗೆ ರೇಖಾವೃತ್ತವಿದ್ದು ವೃತ್ತದ ಒಳಗೆ ಚುಕ್ಕೆಗಳು ಕಂಡುಬಂದಿರುತ್ತದೆ.[36]

ಮುಮ್ಮುಖದಲ್ಲಿ ದಿನ ಇ ಅಹಮದ್‌ದರ್, ಜಹಾನ್ ರೋಷನ್, ಜಿಫತ್–ಇ ಹೈದರ್ ಅಸ್ತ್, ಜರ್ಬ್–ಇ–ಪಟನ್, 1198 ಹಿಜ್ರಿ ಅಜಲ್‌ಸನ್ ಎಂದು ಮುದ್ರಿಸಲಾಗಿದೆ ಹಾಗೆಯೇ ಹಿಮ್ಮುಖದಲ್ಲಿಹವಸ ಸುಲ್ತಾನ್ ಹೈದರ್, ಅಲ್ ರಲಿಯ್ಯುಲ್ ಅದಿಲ್, ಅಜಲ್‌ಸನ್ ಜುಲಸ್ 2 ಎಂದು ಮುದ್ರಿಸಲಾಗಿದೆ. ಅಹ್ಮದಿ ನಾಣ್ಯಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಯನ್ನು ಕಂಡುಬಂದಿದ್ದು, ಕೆಲವು ನಾಣ್ಯಗಳ ಮೇಲೆ ನಾಣ್ಯದ ಹೆಸರನ್ನು ಟಂಕಿಸಿರುವುದು ಕಂಡುಬಂದಿದೆ.

**ಸಿದ್ದಿಕಿ:**

ಇದು ಎರಡು ಪಗೋಡ ಮೌಲ್ಯದ ಚಿನ್ನದ ನಾಣ್ಯವಾಗಿತ್ತು. ಇದನ್ನು ಮೊದಲನೆಯ ಖಲೀಫನಾದ 'ಅಬುಬಕರ್‌ರ ಸದೀಕಿಯ' ಗೌರವಾರ್ಥ ಈ ನಾಣ್ಯಕ್ಕೆ ಹೆಸರನ್ನು ಇಟ್ಟಿದ್ದನು. ಕೆಲವು ಸಿದ್ದಿಕಿ ನಾಣ್ಯಗಳು 6.8 ಗ್ರೈನ್ಸ್ ಹಾಗೂ ಇನ್ನೂ ಕೆಲವು ಸಾಧಿಕ ನಾಣ್ಯಗಳು 6.9 ಗ್ರೈನ್ಸ್ ಇರುವುದು ತಿಳಿದುಬಂದಿದೆ. ಇವುಗಳನ್ನು ಪಟ್ಟಣದಲ್ಲಿ ಕ್ರಿ.ಶ. 1788, 1789, 1790, 1791ರಲ್ಲಿ ಟಂಕಿಸಲಾಗುತ್ತಿತ್ತು. ಇದರ ಅಗಲ 0.75' ಒಳಗೊಂಡಿತ್ತು. ಈ ನಾಣ್ಯದಲ್ಲಿ ಕಂಡು ಬರುವ ಪ್ರಮುಖ ವಿಶೇಷ ಲಕ್ಷಣವೆಂದರೆ, ಅಹ್ಮದೀ ನಾಣ್ಯಗಳಲ್ಲಿ ಕಂಡು ಬರುವ ಅಕ್ಷರಗಳ ಬರಹಗಳನ್ನು ಎರಡು ನಾಣ್ಯದ ಮುಖಗಳಲ್ಲಿ ಕಂಡು ಬಂದಿರುವುದಾಗಿದೆ.[37]

**ಫಾರೂಕೀ ಅಥವಾ ಪಗೋಡ:**

ಇದು ಒಂದು ಪಗೋಡದ ನಾಣ್ಯವಾಗಿದ್ದು ಇದನ್ನು 2ನೇ ಖಲೀಫ್‌ನ ಹೆಸರಿನಲ್ಲಿ ಕರೆಯಲಾಗುತ್ತಿತ್ತು. ಇದರ ತೂಕ 3.4 ಗ್ರೈನ್ಸ್ ಇದ್ದು, ಇದು ಒಂದು ಪಗೋಡದ ಚಿನ್ನದ ನಾಣ್ಯವಾಗಿದ್ದು, 0.6′ ಅಗಲವಿದ್ದು, ಇದನ್ನು ಪಟ್ಟಣ, ನಗರ, ಧಾರವಾಡ ಪ್ರದೇಶದ ಟಂಕಸಾಲೆಗಳಲ್ಲಿ ಕ್ರಿ.ಶ. 1782 ರಿಂದ ಕ್ರಿ.ಶ. 1795ರ ವರೆಗೆ ಟಂಕಿಸಲಾಗಿತ್ತು. ಇದರ ಫಾರೋಕೀ ನಾಣ್ಯಗಳಲ್ಲಿ 3 ರೀತಿಯ ನಾಣ್ಯಗಳನ್ನು ಗುರುತಿಸಬಹುದಾಗಿದೆ.[38]

1. ನಾಣ್ಯದ ಮುಮ್ಮುಖದಲ್ಲಿ 'ಹೈ' ಎಂಬ ಅಕ್ಷರವಿರುವುದು ಹಾಗೂ ಆಳ್ವಿಕೆಯ ವರ್ಷ, ಟಂಕಸಾಲೆಯ ಹೆಸರು ಇರುತಿದ್ದು, ಹಿಮ್ಮುಖದಲ್ಲಿ ಅವನೇ ಸುಲ್ತಾನ್ ನ್ಯಾಯವಾದಿ ಎಂಬ ಪದವಿರುತ್ತಿತ್ತು.
2. ಕೆಲವು ನಾಣ್ಯಗಳ ಹಿಮ್ಮುಖದಲ್ಲಿ ಮುಹಮ್ಮದ್ ಎಂಬ ಪದ ಬರಹದ ಮೊದಲಿನಲ್ಲಿರುತ್ತದೆ ಹಿಮ್ಮುಖದಲ್ಲಿ 'ಹೈ' ಎಂಬ ಅಕ್ಷರವಿದ್ದು, ಅದರ ಸುತ್ತ ಚುಕ್ಕೆಗಳ ವೃತ್ತವಿವುರುದನ್ನು ಟಂಕಿಸಲಾಗಿದೆ.
3. ಇನ್ನೊಂದು ತರಹದ ನಾಣ್ಯದ ಸಮ್ಮುಖದಲ್ಲಿ ಫರೋಕಿ ಎಂದು ನಾಣ್ಯದ ಮೇಲೆ ಮುದ್ರಿಸಲಾಗಿದೆ. ಹಿಮ್ಮುಖದಲ್ಲಿ ಮಹಮ್ಮದ್ ಎಂಬ ಪದ ಕಂಡು ಬಂದಿರುತ್ತದೆ.[39]

**ಪಣಮ್:**

ಟಿಪ್ಪುವು ನೀಡಿದ ಕಡಿಮೆ ಬೆಲೆಯ ನಾಣ್ಯ ಇದು ಇದಕ್ಕೆ ರಹತೀ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು.[40] 5–6 ಗ್ರೇನ್ ಚಿನ್ನ ತೂಕವಿದೆ ಇದು ಅತ್ಯಂತ ಚಿಕ್ಕದಾದ ಚಿನ್ನದ ನಾಣ್ಯವಾಗಿದ್ದು, ಇದರ ತೂಕ 0.34 ಗ್ರಾಂ ಇದನ್ನು ಪಟ್ಟಣ, ಫರೋಕ್, ಕ್ಯಾಲಿಕಟ್, ಧಾರವಾದ, ನಗರ, ದಿಂಡಿಗಲ್ ಪ್ರದೇಶಗಳಲ್ಲಿ ಟಂಕಿಸಲಾಗುತ್ತಿದ್ದು,[41] ಇದಕ್ಕೆ ಯಾವುದೇ ಹೆಸರುಗಳನ್ನು ಇಟ್ಟಿರಲಿಲ್ಲ. ಪಣಮ್ ಎಂದೇ ಕರೆಯಲಾಗುತ್ತಿದ್ದು, ಇದರ ಮುಮ್ಮುಖದಲ್ಲಿ 'ಹೈ' ಎಂಬ ಅಕ್ಷರ ಹಾಗೂ ಸುತ್ತಲು ಚುಕ್ಕೆಗಳಿಂದ ಕೂಡಿದೆ. ಹಿಮ್ಮುಖದಲ್ಲಿ ಟಂಕಶಾಲೆಯ ಹೆಸರನ್ನು ಅಚ್ಚಾಕಿಸಲಾಗುತ್ತಿದ್ದು. ಜೊತೆಗೆ ಟಂಕಿಸಿದ ವರ್ಷವನ್ನು ಅಳವಡಿಸಲಾಗಿದೆ. ಉದಾಹರಣೆ: ಶ್ರೀರಂಗಪಟ್ಟಣದಲ್ಲಿ ಟಂಕಿಸಲಾದ ಪಣಮ್ ನಾಣ್ಯಗಳಲ್ಲಿ 'ಜವ್–ಇ–ಪಟನ್ 1198' ಎಂದು ಮುದ್ರಿಸಲಾಗಿದೆ. ಆದರೆ ಕೆಲವು ಪಣಮ್ ನಾಣ್ಯಗಳಲ್ಲಿ ಇನ್ನೊಂದು ತರದ ಲಕ್ಷಣವಿರುತ್ತಿದ್ದು ಆ ಲಕ್ಷಣವೆಂದರೆ ನಾಣ್ಯದಲ್ಲಿ ಮೊದಲು ವರ್ಷದ ಉಲ್ಲೇಖವಿದ್ದು, ಅದಾದ ನಂತರ ಟಂಕಶಾಲೆಯ ಹೆಸರಿರುವುದನ್ನು ನೋಡಬಹುದು. ಉದಾಹರಣೆಗೆ ನಗರದಲ್ಲಿ ಅಚ್ಚಾದ ನಾಣ್ಯಗಳನ್ನು ಗಮನಿಸಬಹುದಾಗಿದೆ.[42]

**ಟಿಪ್ಪುವಿನ ಬೆಳ್ಳಿ ನಾಣ್ಯಗಳು**

ಟಿಪ್ಪು ಸುಲ್ತಾನ್ ತನ್ನ ಟಂಕಸಾಲೆಯಲ್ಲಿ 7 ರೀತಿಯ ಬೆಳ್ಳಿ ನಾಣ್ಯಗಳನ್ನು ಟಂಕಿಸಿದ್ದು, 7 ಹೆಸರುಗಳನ್ನು ಇಟ್ಟಿದ್ದನು.

**1. ಹೈದರೀ:**

ಇದು ಎರಡು ರೂಪಾಯಿ ಮೌಲ್ಯದ ನಾಣ್ಯವಾಗಿದ್ದು, ಇದನ್ನು 4ನೇ ಖಲೀಫ ಹೈದರ್‌ರವರ ಗೌರವಾರ್ಥವಾಗಿ ಟಿಪ್ಪು ಹೆಸರನ್ನು ಇರಿಸಿದ್ದನು.[43] ಇದರ ತೂಕ 21.5

ರಿಂದ 23.5 ಗ್ರೈನ್ಸ್ ಇದ್ದು, 1.4′ ಅಗಲವನ್ನು ಹೊಂದಿದ್ದವು. ಈ ನಾಣ್ಯದ ಮುಮ್ಮುಖದಲ್ಲಿ ಗೆರೆಗಳು ಇದ್ದು ಚುಕ್ಕೆಗಳಿಂದ ಮೂಡಿದ ವೃತ್ತದೊಳಗೆ ಏಳುಸಾಲುಗಳ ಪರ್ಷಿಯನ್ ಬರಹವನ್ನು ನೋಡಬಹುದಾಗಿದೆ. ಚಿನ್ನದ ಅಹ್ಮದಿ ನಾಣ್ಯದ ಲಕ್ಷಣದಂತೆ ಇದರಲ್ಲಿಯೂ ಸಹ ಟಂಕಶಾಲೆಯ ಹೆಸರು, ಹಿಜಿರ ವರ್ಷವನ್ನು ಮುದ್ರಿಸಲಾಗಿದೆ. ಹಿಮ್ಮುಖದಲ್ಲಿ ಗೆರೆಗಳು ಹಾಗೂ ಚುಕ್ಕಿಗಳಿಂದ ಮೂಡಿದಂತಹ ವೃತ್ತದೊಳಗೆ ಚಿನ್ನದ ನಾಣ್ಯವಾದ ಅಹ್ಮದಿ ನಾಣ್ಯದ ಲಕ್ಷಣವನ್ನು ಹೊಂದಿದೆ.[44]

**2. ಇಮಾಮಿ:**

ಈ ನಾಣ್ಯಕ್ಕೆ ಇಮಾಮಿಗಳ ಗೌರವಾರ್ಥವಾಗಿ ಅವರ ಹೆಸರನ್ನು ಇರಿಸಿದನು. ಈ ನಾಣ್ಯದ ತೂಕವು 10.7 ಗ್ರಾಂಗಳಿಂದ 11.60 ಗ್ರಾಂಗಳನ್ನು ಒಳಗೊಂಡಿದ್ದವು. 1.1″ ಅಗಲ ಹೊಂದಿದೆ. ಇದು ಒಂದು ರೂಪಾಯಿಯ ನಾಣ್ಯದ ಮೌಲ್ಯವಾಗಿದ್ದು, ಇದನ್ನು ನಗರ, ಪಟ್ಟಣ, ಕಲ್ಲಿಕೋಟೆ ಧಾರವಾಡದ ಪ್ರದೇಶಗಳಲ್ಲಿ ಟಂಕಿಸಲಾಗಿದೆ.[45]

**3. ಅಬಿದಿ:**

ಇದು ಅರ್ಧ ರೂಪಾಯಿಯ ನಾಣ್ಯವಾಗಿದ್ದು, ಇದನ್ನು 4ನೇಯ ಮಾಮ್ ಅಲಿಜೈನ್‌ಅಲ್ ಅಬೀದಿನ್ ಅವರ ಗೌರವಾರ್ಥವಾಗಿ ಹೆಸರನ್ನು ಇರಿಸಿದ್ದನು.[46] 5.35 ರಿಂದ 5.8 ಗ್ರೈನ್ಸ್ ತೂಕ ಇದ್ದು 0.8″ ಅಗಲವನ್ನು ಒಳಗೊಂಡಿದೆ. ಇದು 4 ಪಗೋಡದ ಅಹ್ಮದಿ ನಾಣ್ಯದಲ್ಲಿರುವ ಬರವಣಿಗೆಯನ್ನು ಮುದ್ರಿಸಲಾಗಿರುವುದನ್ನು ನೋಡಬಹುದು.[47] ಈ ನಾಣ್ಯವನ್ನು ನಾಲ್ಕನೇ ಇಮಾಮನ 'ಆಲಿಜೀನಲ್ ಅಬೀದಿ' ಎಂಬುವನ ಹೆಸರಿನಲ್ಲಿ ಮುದ್ರಿಸಲಾಗಿದೆ. ಈ ನಾಣ್ಯಗಳನ್ನು ನಗರ ಹಾಗೂ ಪಟ್ಟಣದ ಟಂಕಶಾಲೆಯಲ್ಲಿ ಮಾತ್ರ ಟಂಕಿಸಲಾಗಿದೆ.[48]

**4. ಬಾಕಿರಿ:**

ಬಾಕರೀ ನಾಣ್ಯವು ರೂಪಾಯಿಯ ನಾಣ್ಯವಾಗಿದ್ದು, 5ನೇ ಇಮಾಮ್ ಮಹಮ್ಮದ್ ಅಲ್ ಬಾಕೀರ್ ಎಂಬ ಹೆಸರನ್ನು ಇಟ್ಟಿದ್ದ. 2.68 ಗ್ರೈನ್ಸ್ ರಿಂದ 2.90 ಗ್ರೈನ್ಸ್ ವರೆಗೂ ಇದ್ದು, 0.6″ ಅಗಲವನ್ನು ಒಳಗೊಂಡಿದೆ. ಇದನ್ನು ಶ್ರೀರಂಗಪಟ್ಟಣ ಶಾಲೆಯಲ್ಲಿ ಮಾತ್ರ ಟಂಕಿಸಲಾಗುತ್ತಿತ್ತು.[49]

**5. ಜಫಾರಿ:**

ಈ ನಾಣ್ಯವು ಎಂಟನೆಯ ಒಂದು ರೂಪಾಯಿಯ ನಾಣ್ಯದ ಹೆಸರಾಗಿದ್ದು, 6ನೇಯ ಜಫಾರ್ ಅಲ್ ಸದೀಕ್ ರವರ ಗೌರವಾರ್ಥವಾಗಿ ಹೆಸರನ್ನು ಇಟ್ಟಿದ್ದನ್ನು. ಇದರ ತೂಕವು 20 ಗ್ರಾನ್ಸ್ ಅಗಲ 0.4″ ಒಳಗೊಂಡಿತ್ತು. ಈ ನಾಣ್ಯಗಳನ್ನು

ಶ್ರೀರಂಗಪಟ್ಟಣದಲ್ಲಿ ಮಾತ್ರ ಟಂಕಿಸಲಾಗುತ್ತಿತ್ತು. ಮುಮ್ಮುಖದಲ್ಲಿ ಮಹಲೂದಿ ವರ್ಷವನ್ನು ಮುದ್ರಿಸಿದ್ದು ಹಿಮ್ಮುಖದಲ್ಲಿ ನಾಣ್ಯದ ಹೆಸರನ್ನು ಮುದ್ರಿಸಲಾಗಿದೆ.[50]

**6. ಕಾಜಿಮೀ:**

ಇದು ಹಿದಿನಾರನೆಯ ಒಂದು ರೂಪಾಯಿ ನಾಣ್ಯವಾಗಿದ್ದು. 7ನೇ ಇಮಾಮ್ ಮುಸ್ ಅಲ್ ಖಾಜೀಂ ರವರ ಹೆಸರನ್ನು ಇಟ್ಟಿದ್ದನು. 1.34 ಗ್ರೈನ್ಸ್ ರಿಂದ 1.40 ಗ್ರೈನ್ಸ್ ತನಕ ಒಳಗೊಂಡಿದ್ದು, 0.3″ ಅಗಲವನ್ನು ಹೊಂದಿದೆ. ಈ ನಾಣ್ಯವನ್ನು ಶ್ರೀರಂಗಪಟ್ಟಣದಲ್ಲಿ ಕ್ರಿ.ಶ. 1792 ರಿಂದ ಕ್ರಿ.ಶ. 1798 ರವರೆಗೆ ಟಂಕಿಸಿದ್ದು, 7ನೇ ಇಮಾಮ್ 'ಮೂಸಾಲ್ ಖಾಜ್ಜಿ'ಯ ಹೆಸರಿನಲ್ಲಿ ಮುದ್ರಿಸಿದನು. ಮುಮ್ಮುಖದಲ್ಲಿ ಸನ್ 1220 ಮಹಮ್ಮದ್ ಜರ್ಬ್ ಇ ಪಟನ್ ಎಂದು ಹಿಮ್ಮುಖದಲ್ಲಿ ಕಾಜಿಮೀ ಜುಲೂಸ್ 10 ಎಂದು ಮುದ್ರಿಸಲಾಗಿದೆ.

**7. ಖಿಜ್ರ:**

ಇದು ಬೆಳ್ಳಿಯ ನಾಣ್ಯಗಳ ಅತ್ಯಂತ ಕನಿಷ್ಠ ಮಟ್ಟದ ನಾಣ್ಯವಾಗಿದೆ. ಇದಕ್ಕೆ ಅಲ್ ಖಿಜ್ ಎಂಬ ಸಂತರ ಹೆಸರನ್ನು ಇರಿಸಿದನು. ಇದರ ಮೌಲ್ಯ ಮೂವತ್ತೆರಡನೆಯ ಒಂದು ಭಾಗದ ಖಿಜ್ರ ನಾಣ್ಯವಾಗಿದೆ. ಇದರ ತೂಕವು 0.34 ರಿಂದ 0.36 ಗ್ರೈನ್ಸ್‌ಗಳನ್ನು ಒಳಗೊಂಡಿದೆ. ಇದನ್ನು ಶ್ರೀರಂಗಪಟ್ಟಣದಲ್ಲಿ ಟಂಕಿಸಲಾಗಿದೆ. ಮುಮ್ಮುಖದಲ್ಲಿ ಜರ್ಬ್–ಇ–ದರುಸ/ಸುಲ್ತನತ್ ಎಂದು ಇರುತ್ತಿತ್ತು ಹಿಮ್ಮುಖದಲ್ಲಿ ಖಿಜ್ರ 12 ಎಂದು ಮುದ್ರಿಸಲಾಗಿದೆ.[51]

**ತಾಮ್ರದ ನಾಣ್ಯಗಳು:**

ಟಿಪ್ಪು ಸುಲ್ತಾನ ತಾಮ್ರದ ನಾಣ್ಯಗಳನ್ನು 5 ರೀತಿಯ ಹೆಸರುಗಳಿಂದ ವಿಂಗಡಿಸಿದ್ದನು. ಅವುಗಳೆಂದರೆ, ಅ. ಓಧಮನಿ ಅಥವಾ ಮಸ್ತಾರಿ, ಆ. ಜೋಹ್ರಾ. ಇ. ಬಹ್ರಾಂ, ಈ. ಅಖ್ತರ್, ಉ. ಕುತುಬ್

**1. ಓಧಮನಿ ಅಥವಾ ಮಸ್ತಾರಿ:**

ಇದು 2 ಪೈಸ ಮೌಲ್ಯದ ನಾಣ್ಯವಾಗಿದ್ದು ಇದನ್ನು 3ನೇ ಖಲೀಫ್‌ರ ಹೆಸರಾದ ಒಟಮಾನ್ ಎಂಬ ಹೆಸರಿನಲ್ಲಿ ಟಂಕಿಸಿದನು[52] ಹಾಗೂ ಗ್ರಹಗಳ ಹೆಸರನ್ನು ಹೋಲುವಂತೆ ಅರಬಿಕ್ ಭಾಷೆಯ ಹೆಸರಾದ ಮುಷ್ತರೀ (ಬೃಹಸ್ಪತಿ) ಹೆಸರನ್ನು ಇಟ್ಟಿದ್ದನು. ಈ ನಾಣ್ಯವು ತಾಮ್ರದ ನಾಣ್ಯವಾಗಿದ್ದು, 21.5 ಗ್ರೈನ್ಸ್‌ನಿಂದ 23.5 ಗ್ರೈನ್ಸ್ ತೂಕವನ್ನು ಒಳಗೊಂಡಿದ್ದು ಇದನ್ನು ಎರಡು ಪೈಸಗಳೆಂದು ಹೆಸರಿಸಿದ್ದನು. ಈ ನಾಣ್ಯಗಳನ್ನು ತನ್ನ ಆಡಳಿತ ಪ್ರದೇಶಗಳಾದ ಪಟ್ಟಣ, ಫರೂಕ್, ಕಲ್ಲಿಕೋಟೆ, ನಗರ, ಚಿತ್ರದುರ್ಗ ಪ್ರದೇಶಗಳಲ್ಲಿ ಟಂಕಿಸುತ್ತಿದ್ದನು. ಈ ನಾಣ್ಯವು ತುಂಬಾ ಸುಂದರವಾಗಿತ್ತು.

ಓಧಮನಿ, ಅಥವಾ ಮುಸ್ತಾರಿ ನಾಣ್ಯಗಳಲ್ಲಿ 3 ರೀತಿಯ ನಾಣ್ಯಗಳನ್ನು ನೋಡಬಹುದಾಗಿದೆ.

ಮುಮ್ಮುಖದಲ್ಲಿ ಸಾಮಾನ್ಯವಾಗಿ ಆನೆಯ ಚಿತ್ರವು ಕಂಡು ಬರುತ್ತದೆ. ಹಿಮ್ಮುಖದಲ್ಲಿ 3 ರೀತಿಯ ಪ್ರಕಾರದ ನಾಣ್ಯಗಳನ್ನು ನೋಡಬಹುದಾಗಿದೆ.

1. ಓಧಮನಿ / ದರ್ಬ್–ಇ ದರುಸ್ / ಸುತ್ತನತ್ ಇ ಪಟನ್ ಎಂದು ಮುದ್ರಿಸಲಾಗಿದೆ.
2. ಮುಷ್ಕರೀ / ಜರ್ಬ್ ಇ ದರುಸ್ ಸುಲ್ತಾನತ್ / ಇ ಪಟನ್ / 1222 ಮೌಲೂದಿ ಎಂದು ಮುದ್ರಿಸಲಾಗಿದೆ.
3. ಮುಸ್ತುರಿ / ದರ್ಬ್ ಇ ದರುಸ್ / ಸುತ್ತನತ್ ಎಂದು ಮುದ್ರಿಸಿದ್ದನು.

ಈ ರೀತಿಯ ಲಕ್ಷಣವನ್ನು ಓಧಮನಿ ಅಥವಾ ಮುಸ್ತುರಿ ನಾಣ್ಯದ ಹಿಮ್ಮುಖದಲ್ಲಿ ನೋಡಬಹುದಾಗಿದೆ.[53]

**2. ಜೋಹ್ರ :**

ಇದು ಒಂದು ಪೈಸದ ನಾಣ್ಯವಾಗಿದ್ದು, ಇದು ಶುಕ್ರ ಗ್ರಹದ ಹೆಸರಾಗಿದ್ದು ಇದನ್ನು ಪಟ್ಟಣ ನಗರದಲ್ಲಿ ಟಂಕಿಸಲಾಗಿತು. 10.5 ಗ್ರೈನ್ಸ್‌ನಿಂದ 12.50 ಗ್ರೈನ್ಸ್ ಒಳಗೊಂಡಿದ್ದು, 0.9″ ಅಗಲವಿರುತ್ತದೆ. 3 ರೀತಿಯ ನಾಣ್ಯಗಳನ್ನು ಜೋಹ್ರದಲ್ಲಿ ನೋಡಬಹುದಾಗಿದೆ.

ಅ. ಮುಮ್ಮುಖದಲ್ಲಿ ಆನೆಯು ಬಲಭಾಗಕ್ಕೆ ಮುಖಮಾಡಿ ಕೊಂಡು ನಿಂತಿದೆ. ಹಾಗೂ ಬಾಲವನ್ನು ಮೇಲಕ್ಕೆ ಎತ್ತಿರುತ್ತದೆ. ಮತ್ತು ನಾಣ್ಯದ ಮೇಲ್ಭಾಗದಲ್ಲಿ ದಿನಾಂಕವನ್ನು ಮುದ್ರಿಸಲಾಗಿದೆ. ಹಿಮ್ಮುಖದಲ್ಲಿ ಜೋಹ್ರ ಜರ್ಬ್ ಇ ಪಟಣ್ ಎಂದು ಮುದ್ರಿಸಲಾಗಿದ್ದು, ಸುತ್ತಲೂ ಚುಕ್ಕಿಗಳಿಂದ ಕೂಡಿರುವ ವೃತ್ತವನ್ನು ನೋಡಬಹುದಾಗಿದೆ.

ಅ. ಮುಮ್ಮುಖದಲ್ಲಿ ದಿನಾಂಕವನ್ನು ಮುದ್ರಿಸಲಾಗಿದೆ ಹಾಗೂ ಮೌಲೂದಿ ಎಂಬ ಅಕ್ಷರವಿದೆ. ಹಿಮ್ಮುಖದಲ್ಲಿ ಜೋಹ್ರ ಜರ್ಬ್ ಇ ಪಟಣ್ ಎಂದು ಮುದ್ರಿಸಲಾಗಿದೆ.

ಇ. ಇನ್ನೊಂದು ನಾಣ್ಯದ ಮುಮ್ಮುಖದಲ್ಲಿ ಬರಹವಿರುವುದಿಲ್ಲ ಆದರೆ ಹಿಮ್ಮುಖದಲ್ಲಿ ಜರ್ಬ್ ಇ ಪಟನ್ ಜೋಹ್ರ 1224 ಮೌಲೂದೀ ಎನ್ನುವ ಅಕ್ಷರವಿರುವುದನ್ನು ಕಾಣಬಹುದು.[54]

**3. ಬಹ್ರಾಂ:**

ಇದು ಅರ್ಧ ಪೈಸ ನಾಣ್ಯವಾಗಿದ್ದು, ಇದಕ್ಕೆ ಟಿಪ್ಪು ಸುಲ್ತಾನ್ ಬಹ್ರಾಂ ಎಂದು ಹೆಸರಿಟ್ಟಿದ್ದನು. ಅಂಗಾರದ ಗ್ರಹದ ಹೆಸರ ಅರ್ಥವುಳ್ಳದಾಗಿತ್ತು.[55] ಇವನು ಬಹ್ರಾಂ ಹೆಸರಿನಲ್ಲಿ ಟಂಕಿಸುತ್ತಿದ್ದ ನಾಣ್ಯಗಳು 5.51 ಗ್ರೈನ್ಸ್ ರಿಂದ 5.77 ಗ್ರೈನ್ಸ್ ತೂಕವನ್ನು ಒಳಗೊಂಡಿರುತ್ತಿದ್ದುದ ಇದನ್ನು ಪಟ್ಟಣ, ಫರೂಕಿ, ಬೆಂಗಳೂರು, ನಗರ, ಸತ್ಯಮಂಗಲ, ಗುರ್ರಂಕೊಂಡ, ನಜರ್ ಬಾದ್ (ಮೈಸೂರು) ಧಾರವಾದ ಮತ್ತು ದಿಂಡಿಗಲ್ ಪ್ರದೇಶಗಳಲ್ಲಿ ಟಂಕಿಸುತ್ತಿದ್ದನು.[56]

ಅರ್ಧ ಪೈಸ ನಾಣ್ಯದಲ್ಲಿ ಹಿಮ್ಮುಖದಲ್ಲಿ ಉರ್ದುವಿನಲ್ಲಿ 'ಫರೂಕ್ ಮಿಸಾರ್' ಎಂದು ಮುದ್ರಿಸಲಾಗಿತ್ತು. ಚಿತ್ರದುರ್ಗ ನಗರಕ್ಕೆ ಟಿಪ್ಪು ಸುಲ್ತಾನ್ 'ಫರೂಕ್ ಮಿಸಾರ್' ಎಂಬ ಉರ್ದು ಹೆಸರನ್ನು ಇಟ್ಟು ಅರ್ಧ ಪೈಸ ನಾಣ್ಯವನ್ನು ಅಲ್ಲಿ ಟಂಕಿಸುತ್ತಿದ್ದನು.[57]

**4. ಅಖ್ತರ್:**

ಕಾಲು ಪೈಸದ ಮೌಲ್ಯದ ತಾಮ್ರದ ನಾಣ್ಯವಾಗಿದ್ದು,ನಕ್ಷತ್ರ ಎಂಬ ಹೆಸರಿನ ತಾಮ್ರ ನಾಣ್ಯವಾಗಿದೆ. ಇದರ ತೂಕ 2.66 ಗ್ರೈನ್ಸ್ ರಿಂದ 2.92 ಗ್ರೈನ್ಸ್ ತೂಕವಿದ್ದು, 0.5″ ಅಗಲವನ್ನು ಹೊಂದಿದೆ. ಅಖ್ತರ್ ಎಂಬ ತಾಮ್ರದ ನಾಣ್ಯವನ್ನು ಟಿಪ್ಪು ಸುಲ್ತಾನ್ ಧಾರವಾಡ ಪ್ರದೇಶದ ಟಂಕಸಾಲೆಯನ್ನು ಬಿಟ್ಟು ಉಳಿದ ಪ್ರದೇಶದ ಟಂಕಸಾಲೆಯಲ್ಲಿ ಮುದ್ರಿಸಗೊಳ್ಳುತಿತ್ತು. ಪಟ್ಟಣ, ಬೆಂಗಳೂರು, ಕ್ಯಾಲಿಕಟ್ ಟಂಕಸಾಲೆಗಳಲ್ಲಿ ದಿನಾಂಕವನ್ನು ಮುದ್ರಿಸುತ್ತಿರಲಿಲ್ಲ, ನಗರ, ಗೊತ್ತಿ, ದಿಂಡಿಗಲ್‌ನ ಟಂಕಸಾಲೆಗಳಲ್ಲಿ ದಿನಾಂಕ ಮುದ್ರಿಸಲಾಗುತ್ತಿತ್ತು. ಆದರೂ ಸಹ ಅಖ್ತರ ನಾಣ್ಯಗಳಲ್ಲಿ ಹಲವಾರು ದೋಷಗಳು ವಿಶೇಷವಾಗಿ ಕಂಡುಬಂದಿರುತ್ತವೆ.

**5. ಕುತುಬ್:**

ಕೊನೆಯ ತಾಮ್ರದ ನಾಣ್ಯವಾಗಿದ್ದು, ದೃವ ನಕ್ಷತ್ರದ ಹೆಸರನ್ನುವುಳ್ಳ ಅರಬಿಕ್ ಪದದಿಂದ ಕರೆಯಲಾಗುತ್ತಿತ್ತು. ಈ ನಾಣ್ಯವು 1.3 ಗ್ರೈನ್ಸ್‌ನಿಂದ 1.5 ಗ್ರೈನ್ಸ್ ಒಳಗೊಂಡಿದ್ದು, 0.4″ ಅಗಲವನ್ನು ಹೊಂದಿದ್ದು, ಇದನ್ನು ಬೆಂಗಳೂರು, ಪಟ್ಟಣ, ಸತ್ಯಮಂಗಲ, ನಗರ, ಚಿತ್ರದುರ್ಗ ಪ್ರದೇಶದ ಟಂಕಸಾಲೆಗಳಲ್ಲಿ ಮುದ್ರಿಸಲಾಗಿದೆ. ನಾಣ್ಯದ ಹಿಮ್ಮುಖದಲ್ಲಿ ಟಂಕಸಾಲೆಯ ಹೆಸರು ಹಾಗೂ ದಿನಾಂಕವನ್ನು ಮುದ್ರಿಸಲಾಗಿದೆ.[58]

ಹೈದರಾಲಿ ಮತ್ತು ಟಿಪ್ಪು ನಾಣ್ಯ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆಯನ್ನು ತಂದರು. ನಾಣ್ಯ ತಯಾರಿಕೆಯ ಒಂದು ಪ್ರಮುಖ ಉದ್ದಿಮೆಯಾಗಿಯೂ ಬೆಳೆದಿತ್ತು ಮತ್ತು ಅಂದಿನ ಆರ್ಥಿಕ ವ್ಯವಸ್ಥೆಯನ್ನು ಸಮತೋಲನದಲ್ಲಿಡಲು ಸಹಕಾರಿಯಾಗಿತ್ತು.

**ಕೊನೆ ಟಿಪ್ಪಣಿಗಳು :**

---

[1] ನರಸಿಂಹಮೂರ್ತಿ, ಎ.ವಿ., 'ಕರ್ನಾಟಕ ನಾಣ್ಯ ಪರಂಪರೆ', 2003, ಪು.271.

[2] ಅದೇ, ಪು.272.

[3] ಅದೇ.

[4] ಗೋಪಾಲ್, ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.128.

[5] ಅದೇ, ಪು.129.

[6] ಸೂರ್ಯನಾಥ ಯು. ಕಾಮತ್. ದೇವರ ಕೊಂಡಾರೆಡ್ಡಿ, ಜಗನ್ನಾಥ್, ಎಸ್.ಎ., ಕನ್ನಡಕ್ಕೆ ಅನುವಾದ ಶಹಾಡಿ, ಆರ್., ಶಿವಗೌಡ ಬಾ. ಪಾಟೀಲ, 'ಇತಿಹಾಸ ದರ್ಶನ', ಸಂ.–6, 1991, ಪು.147.

[7] ಹವಾಕಸ್, ಹೆಚ್.ಬಿ., 'ಕಾಯನ್ಸ್ ಆಫ್ ಮೈಸೂರು', 1856, ಪು.5.

[8] ಗೋಪಾಲ್, ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.129.

[9] ಅದೇ, ಪು.129.

[10] ಹೆಂಡರ್ಸನ್, ಜಿ.ಆರ್., 'ದಿ ಕಾಯಿನ್ಸ್ ಆಫ್ ಹೈದರಾಲಿ ಅಂಡ್ ಟಿಪ್ಪು ಸ್ತುಲಾನ್', 1921, ಪು.5.

[11] ಹವಾಕಸ್, ಹೆಚ್.ಬಿ., 'ಕಾಯನ್ಸ್ ಆಫ್ ಮೈಸೂರು', 1856, ಪು.5.

[12] ರೈಸ್, ಬಿ.ಎಲ್., 'ಮೈಸೂರು ಗ್ಯಾಸೆಟಿಯರ್', 2004, ಪು.84.

[13] ಹೆಂಡರ್ಸನ್, ಜಿ.ಆರ್., ' ದಿ ಕಾಯಿನ್ಸ್ ಆಫ್ ಹೈದರ್ ಆಲಿ ಅಂಡ್ ಟಿಪ್ಪು ಸುಲ್ತಾನ್', 1921, ಪು.5.

[14] ಹೆಂಡರ್ಸನ್, ಜಿ.ಆರ್., 'ದಿ ಕಾಯಿನ್ಸ್ ಆಫ್ ಹೈದರ್ ಆಲಿ ಅಂಡ್ ಟಿಪ್ಪು ಸ್ತುಲಾನ್', 1921, ಪು.4.

[15] ಅದೇ, ಪು.4.

[16] ನರಸಿಂಹಮೂರ್ತಿ, ಎ.ವಿ., 'ಕರ್ನಾಟಕ ನಾಣ್ಯ ಪರಂಪರೆ', 2003, ಪು.273.

[17] ಹೆಂಡರ್ಸನ್, ಜಿ.ಆರ್., 'ದಿ ಕಾಯಿನ್ಸ್ ಆಫ್ ಹೈದರ್ ಆಲಿ ಅಂಡ್ ಟಿಪ್ಪು ಸ್ತುಲಾನ್', 1921, ಪು.5.

[18] ಅದೇ, ಪು.7.

[19] ಅದೇ, ಪು.7.

[20] ಅದೇ, ಪು.7.

[21] ಗೋಪಾಲ್, ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.130.

[22] ಹೆಂಡರ್ಸನ್, ಜಿ.ಆರ್., 'ದಿ ಕಾಯಿನ್ಸ್ ಆಫ್ ಹೈದರ್ ಆಲಿ ಅಂಡ್ ಟಿಪ್ಪು ಸ್ತುಲಾನ್', 1921, ಪು.31.

[23] ಗೋಪಾಲ್, ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2010, ಪು.308.

[24] ಹೆಂಡರ್ಸನ್, ಜಿ.ಆರ್., 'ದಿ ಕಾಯಿನ್ಸ್ ಆಫ್ ಹೈದರ್ ಆಲಿ ಅಂಡ್ ಟಿಪ್ಪು ಸ್ತುಲಾನ್', 1921, ಪು.87.

[25] ಸೂರ್ಯನಾಥ ಯು. ಕಾಮತ್ (ಮು.ಸಂ.), ಕರ್ನಾಟಕ ರಾಜ್ಯ ಗೆಜೆಟಿಯರ್, ಧಾರವಾಡ ಜಿಲ್ಲೆ, 1995, ಪು.104.

[26] ಗೋಪಾಲ್, ಆರ್. (ಸಂ.), 'ಟಿಪ್ಪು ಸುಲ್ತಾನ್ ದಿ ಟೈಗರ್ ಆಫ್ ಮೈಸೂರು', 2010, ಪು.308.

[27] ಅದೇ, ಪು.308.



[28] ಅದೇ, ಪು.309.

[29] ಹೆಂಡರ್ಸನ್, ಜಿ.ಆರ್., 'ದಿ ಕಾಯಿನ್ಸ್ ಆಫ್ ಹೈದರ್ ಆಲಿ ಅಂಡ್ ಟಿಪ್ಪುಸ್ತುಲಾನ್', 1921, ಪು.103.

[30] ಅದೇ, ಪು.100.

[31] ಅದೇ, ಪು.96.

[32] ಗೋಪಾಲ್, ಆರ್., 'ಟಿಪ್ಪು ಸ್ತುಲಾನ್ ದಿ ಟೈಗರ್ ಆಫ್ ಮೈಸೂರು', 2010, ಪು.309.

[33] ನರಸಿಂಹಮೂರ್ತಿ, ಎ.ವಿ., 'ಕರ್ನಾಟಕ ನಾಣ್ಯ ಪರಂಪರೆ', 2003, ಪು.283.

[34] ಟೈಲರ್, ಪಿ., 'ದಿ ಕಾಯಿನ್ಸ್ ಆಫ್ ಟಿಪ್ಪು ಸ್ತುಲಾನ್', 1914, ಪು.13.

[35] ಷೇಕ್ ಅಲಿ, ಬಿ., 'ಕರ್ನಾಟಕ ಚರಿತ್ರೆ' ಸಂ.–5, 1997, ಪು.515.

[36] ಗೋಪಾಲ್, ಆರ್., 'ಟಿಪ್ಪು ಸುಲ್ತಾನ್ ದಿ ಟೈಗರ್ ಆಫ್ ಮೈಸೂರು', 2010, ಪು.310.

[37] ಅದೇ, ಪು.310.

[38] ಅದೇ, ಪು.311.

[39] ಅದೇ, ಪು.311.

[40] ಟೈಲರ್, ಪಿ., 'ದಿ ಕಾಯಿನ್ಸ್ ಆಫ್ ಟಿಪ್ಪುಸುಲ್ತಾನ್', 1914, ಪು.13.

[41] ಗೋಪಾಲ್, ಆರ್., 'ಟಿಪ್ಪುಸುಲ್ತಾನ್ ದಿ ಟೈಗರ್ ಆಫ್ ಮೈಸೂರು', 2010, ಪು.312.

[42] ಅದೇ, ಪು.312.

[43] ಟೈಲರ್, ಪಿ., 'ದಿ ಕಾಯಿನ್ಸ್ ಆಫ್ ಟಿಪ್ಪುಸುಲ್ತಾನ್', 1914, ಪು.14.

[44] ಗೋಪಾಲ್, ಆರ್., 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.132.

[45] ಅದೇ, ಪು.312.

[46] ಟೈಲರ್, ಪಿ., 'ದಿ ಕಾಯಿನ್ಸ್ ಆಫ್ ಟಿಪ್ಪುಸುಲ್ತಾನ್', 1914, ಪು.15.

[47] ಗೋಪಾಲ್, ಆರ್., 'ಟಿಪ್ಪುಸುಲ್ತಾನ್ ದಿ ಟೈಗರ್ ಆಫ್ ಮೈಸೂರು', 2010, ಪು.313.

[48] ಖಂಡೋಬರಾವ್, ಎಸ್., ನಾಣ್ಯ ಕರ್ನಾಟಕ ವಸ್ತು ವಿನಿಮಯದಿಂದ, ಕ್ರಿ.ಶ.2000 ರವರೆಗೆ, 2003, ಪು.158.

[49] ಗೋಪಾಲ್, ಆರ್., 'ಟಿಪ್ಪುಸುಲ್ತಾನ್ ದಿ ಟೈಗರ್ ಆಫ್ ಮೈಸೂರು', 2010, ಪು.313.

[50] ಅದೇ, ಪು.313.

[51] ಅದೇ, ಪು.314.

[52] ಟೈಲರ್, ಪಿ., 'ದಿ ಕಾಯಿನ್ಸ್ ಆಫ್ ಟಿಪ್ಪುಸುಲ್ತಾನ್', 1914, ಪು.16.

[53] ಗೋಪಾಲ್, ಆರ್., 'ಟಿಪ್ಪುಸುಲ್ತಾನ್ ದಿ ಟೈಗರ್ ಆಫ್ ಮೈಸೂರು', 2010, ಪು.314.

[54] ಅದೇ, ಪು.315.

[55] ಗೋಪಾಲ್, ಆರ್., 'ಟಿಪ್ಪುಸುಲ್ತಾನ್ ದಿ ಟೈಗರ್ ಆಫ್ ಮೈಸೂರು', 2010, ಪು.310.

[56] ಅದೇ, ಪು.315.

[57] ಗೋಪಾಲ್, ಆರ್., 'ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.272.

[58] ಗೋಪಾಲ್, ಆರ್., 'ಟಿಪ್ಪುಸುಲ್ತಾನ್ ದಿ ಟೈಗರ್ ಆಫ್ ಮೈಸೂರು', 2010, ಪು.316.

## ಅಧ್ಯಾಯ–5

# ಆರ್ಥಿಕ ಜೀವನ

ಕೈಗಾರಿಕೆಗಳು ಜನರ ಆರ್ಥಿಕ ಜೀವನ ಸಮೃದ್ಧವಾಗಲು ನೆರವಾಗುತ್ತವೆ. ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿನ ಕೈಗಾರಿಕೆಗಳು ಆ ಕಾಲದ ಜನಜೀವನದ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿವೆ. ಇವರು ಸ್ಥಾಪಿಸಿದ ಕೈಗಾರಿಕೆಗಳು ಜನರ ಸ್ಥಿತಿಗತಿಗಳನ್ನು ಸುಧಾರಿಸಿದವು. ಆಯುಧೋಪಕರಣ ಕೈಗಾರಿಕೆಗಳು ರಾಜ್ಯದ ವಿಸ್ತರಣೆ ಮತ್ತು ಸಂಪದಾಭಿವೃದ್ಧಿಗೆ ಕಾರಣವಾಗಿವೆ.

### 5.1 ಕಂದಾಯ :

ಟಿಪ್ಪು ಸುಲ್ತಾನನು ಕಂದಾಯ ವ್ಯವಸ್ಥೆಯಲ್ಲಿ ಅತ್ಯಂತ ಆಸಕ್ತಿಯನ್ನು ವಹಿಸಿದ್ದನು. ಒಂದು ರಾಜ್ಯವು ಶ್ರೀಮಂತವಾಗಬೇಕಾದರೆ ಆರ್ಥಿಕವಾಗಿ ಸದೃಡವಾಗಲು ಕೈಗಾರಿಕೆಗಳು, ಕೃಷಿ, ವ್ಯಾಪಾರ, ವಾಣಿಜ್ಯ, ಕಂದಾಯ ಪದ್ದತಿ ಅತ್ಯಂತ ಅವಶ್ಯಕವಾದವುಗಳು ಎಂದು ತಿಳಿದಿದ್ದನು. ಕಂದಾಯ ವ್ಯವಸ್ಥೆಯಲ್ಲಿ ತೆರಿಗೆ ಸಂಗ್ರಹಣೆಗಾಗಿ ಭೂಮಿಯನ್ನು ಅದರ ಗುಣಮಟ್ಟ, ನೀರಾವರಿಯ ಸೌಲಭ್ಯ, ಬೆಳೆಗೆ ಅನುಗುಣವಾಗಿ ಭೂಮಿಯನ್ನು ವಿಂಗಡಿಸಲಾಗಿತ್ತು. ತೆರಿಗೆಯನ್ನು ಸಂಗ್ರಹಿಸುವಾಗ ಕೆಲವು ಬಗೆಯ ಭೂಮಿಯ ಬೆಳೆಗೆ ರೈತರು ವಸ್ತು ರೂಪದಲ್ಲಿ ತೆರಿಗೆಯನ್ನು ಸಂಗ್ರಹಿಸಿ, ಕೆಲವು ಭೂಮಿಯ ಕೃಷಿಯ ಉತ್ಪನ್ನಕ್ಕೆ ಹಣದ ರೂಪದಲ್ಲಿ ತೆರಿಗೆ ಸಂಗ್ರಹಿಸುತ್ತಿದ್ದನು. ರೈತರ ಹಿತವನ್ನು ಗಮನಿಸಿ ಕಂದಾಯದಲ್ಲಿ ರಿಯಾಯಿತಿಗಳನ್ನು ನೀಡಿದ್ದನು.

ಟಿಪ್ಪು ಊಳಿಗಮಾನ್ಯ ಪದ್ಧತಿಯನ್ನು ಪರೀಕ್ಷಿಸಿ ತೆರಿಗೆಗಳನ್ನು ವಸೂಲು ಮಾಡುವ ಆಡಳಿತವನ್ನು ಪಾಳೇಗಾರರಿಂದ ಕಿತ್ತುಕೊಂಡು ರಾಜ್ಯದಾದ್ಯಂತ ಹೊಸ ತೆರಿಗೆ ವ್ಯವಸ್ಥೆಯನ್ನು ಜಾರಿಗೆ ತಂದನು. ಇದರಿಂದ ಆನೇಕ ಕಡೆ ರೈತರಿಂದ ಸರ್ಕಾರವು ನೇರವಾಗಿ ಕಂದಾಯವನ್ನು ಪಡೆಯುವ ವ್ಯವಸ್ಥೆ ಜಾರಿಗೆ ಬಂದಿತು. ಕಂದಾಯ ವಸೂಲಿಗೆ ಟಿಪ್ಪು ತನ್ನ ಸರ್ಕಾರದಲ್ಲಿ ಹಲವಾರು ಅಧಿಕಾರಿಗಳನ್ನು ನೇಮಿಸಿಕೊಂಡಿದ್ದನು.

ಟಿಪ್ಪು ತನ್ನ ರಾಜ್ಯವನ್ನು ತಲಾ 500 ಪಗೋಡ ವರಮಾನವನ್ನು ಕೊಡುವ ಸಣ್ಣ ಘಟಕಗಳನ್ನಾಗಿ ವಿಂಗಡಿಸಿಕೊಂಡನು. ಉತ್ತಮವಾಗಿ ಕಂದಾಯದ ಆಡಳಿತವನ್ನು ನಡೆಸುವ ಅಕಾಂಕ್ಷೆಯಿಂದಾಗಿ ಅದಕ್ಕೆ 'ತುಕಡಿ' ಎಂದು ಹೆಸರನ್ನು ಇಟ್ಟಿದ್ದನು. ಇದು ಅಮಲದಾರನ ಕೈಕೆಳಗಿನ ಆಡಳಿತದಲ್ಲಿತ್ತು. ಈ ತುಕಡಿಯಲ್ಲಿ ಅಮಲದಾರ ಅಷ್ಟೇ ಅಲ್ಲದೆ ವಿವಿಧ ಅಧಿಕಾರಿಗಳನ್ನು ನೇಮಕ ಮಾಡಿದ್ದನು. ತುಕಡಿಯಲ್ಲಿ ಒಬ್ಬ ಅಮಲದಾರ, ಒಬ್ಬ ಶಿರಸ್ತೆದಾರ, ಮೂರು ಜನ ಗುಮಾಸ್ಥರು, ಒಬ್ಬ ತರಫ್‌ದಾರ,

ಒಬ್ಬ ಸರಾಫ್, ಒಬ್ಬ ಮುನಿಷ, ಒಬ್ಬ ಗೊಲ್ಲ ಎಂಬುವವರು ಇದ್ದರು. ಇವರ ಜೊತೆ ಕಂದಾಯ ಆಡಳಿತದ ಸಹಾಯಕ್ಕೆ 6 ಜನ ಸಹಾಯಕರನ್ನು ನೇಮಕ ಮಾಡಿದ್ದನು. ಈ ರೀತಿಯ ಅಧಿಕಾರಿಗಳು ಪ್ರತಿಯೊಂದು ತುಕಡಿಯಲ್ಲಿಯೂ ಸಹ ಕಂಡು ಬಂದ್ದಿದರು.[1]

ಟಿಪ್ಪು ಈ ರೀತಿಯ 20 ಅಥವಾ 30 ತುಕಡಿಗಳಿಗೆ 'ಅಸಫ್' ಎಂಬ ಒಂದು ಕಛೇರಿಯನ್ನು ಸ್ಥಾಪಿಸಿದ್ದನು. ಇದರಲ್ಲಿಯೂ ಸಹ ಉತ್ತಮ ವ್ಯಕ್ತಿಗಳನ್ನು ಇದಕ್ಕೆ ನೇಮಕ ಮಾಡಿಕೊಳ್ಳುತ್ತಿದ್ದನು. ಪ್ರಸ್ತುತ ದಿನಗಳಲ್ಲಿ ಜಿಲ್ಲೆ ಇದ್ದ ಹಾಗೆ ಅಂದಿನ ಕಾಲದಲ್ಲಿ ಅಸಫ್ ಕಛೇರಿಯು ಇತ್ತು. ಅಸಫ್ ಕಛೇರಿಯಲ್ಲಿ 'ಅಸಫ್' ಎಂಬ ಪ್ರಧಾನ ಅಧಿಕಾರಿಯು ಸಂಪೂರ್ಣ ಕಂದಾಯ ಇಲಾಖೆಯ ಹೊಣೆಗಾರಿಕೆ ಹೊತ್ತಿದ್ದನು. ಟಿಪ್ಪು ಈ ಇಲಾಖೆಯನ್ನು ಸ್ಥಾಪಿಸುವ ಪ್ರಮುಖವಾದ ಕಾರಣವೆಂದರೆ ತನ್ನ ರಾಜ್ಯದ ಪ್ರದೇಶಗಳಲ್ಲಿ ಭೂಮಾಲೀಕರು, ಪಾಳೇಗಾರರು, ಜಮೀನ್ದಾರರು ಇವರುಗಳಿಂದ ರೈತರಿಗೆ ತೊಂದರೆಯಾಗಬಾರದು. ಕೃಷಿ ಮತ್ತು ವ್ಯಾಪಾರ ಚಟುವಟಿಕೆಗಳಲ್ಲಿ ಮದ್ಯವರ್ತಿಗಳಿಂದ ಆಗುವ ನಷ್ಟಗಳು, ತೊಂದರೆಗಳನ್ನು ತಡೆಗಟ್ಟುವುದು, ರಾಜ್ಯದ ಬೊಕ್ಕಸಕ್ಕೆ ನಷ್ಟವಾಗುತ್ತಿರುವುದನ್ನು ಸರಿದೂಗಿಸಲು ಹಾಗೆಯೇ ಪ್ರಮುಖ ಮತ್ತೊಂದು ಆಶಯವೆಂದರೆ ರೈತರ ಮತ್ತು ರಾಜ್ಯದ ಹಿತ ಕಾಪಾಡುವುದು. ಹಾಗಾಗಿ ಕಂದಾಯ ಇಲಾಖೆಗೆ ಹೆಚ್ಚಿನ ಸರಕಾರಿ ನೌಕರರನ್ನು ನೇಮಕ ಮಾಡಿಕೊಂಡು ಹಳೆಯ ಭೂಕಂದಾಯವನ್ನು ತೆಗೆದುಹಾಕಿದನು. ಇದರಿಂದ ಹಳೆಯ ಭೂಮಾಲೀಕರು ತಮ್ಮ ಜಮೀನಿನ ಅಧಿಕಾರವನ್ನು ಕಳೆದುಕೊಂಡರು. ಅವರ ಜಮೀನು ತಾಕುಗಳನ್ನು ಟಿಪ್ಪು ಸರಕಾರವು ಸ್ವಾಧೀನಕ್ಕೆ ತೆಗೆದುಕೊಂಡಿತ್ತು. ಇದರಿಂದ ರೈತರಿಗೆ ಹೆಚ್ಚಿನ ಅನೂಕೂಲವಾಯಿತು. ಇದೊಂದು ದೂರದೃಷ್ಟಿಯಿಂದ ಉತ್ತಮ ಆಡಳಿತದ ಕಾರ್ಯವಾಯಿತು.[2]

ಕೆಲವು ಸಂಧರ್ಭಗಳಲ್ಲಿ ಟಿಪ್ಪು ಸುಲ್ತಾನ್ ಗುತ್ತಿಗೆ ಬೇಸಾಯದ ಹಳೆಯ ಪದ್ಧತಿಗೆ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದನು. ಇದನ್ನು ಅಧಿಕ ಪ್ರಮಾಣದಲ್ಲಿ ಪ್ರಚಲಿತಗೊಳಿಸದೆ ಈ ಪದ್ಧತಿಯಲ್ಲಿ ಸುಧಾರಣೆಯನ್ನು ತರಲು ಹಲವು ಕ್ರಮಗಳನ್ನು ಕೈಗೊಂಡಿದ್ದನು. ಅವುಗಳೆಂದರೆ ಮೊದಲನೆಯದಾಗಿ ತನ್ನ ಸರಕಾರದಲ್ಲಿದ್ದ ಮುಖ್ಯ ಅಧಿಕಾರಿಗಳಿಗೆ ಬೇಸಾಯದ ಹಕ್ಕನ್ನು ನೀಡಿರಲಿಲ್ಲ, ಮತ್ತೊಂದು ಸುಧಾರಣಾ ಕ್ರಮವೇನೆಂದರೆ ಒಬ್ಬ ವ್ಯಕ್ತಿಯು ತನ್ನ ಸ್ವಂತ ಜಮೀನು ಒಂದು ಮೌಜಕ್ಕಿಂತ ಹೆಚ್ಚಿಗೆ ಭೂಮಿಯನ್ನು ಹೊಂದಲು ಅನುಮತಿಯಿರಲಿಲ್ಲ. ಈ ಜಮೀನನ್ನು ವ್ಯವಸಾಯಕ್ಕೆ ಒಳಪಡಿಸುವುದಕ್ಕಿಂತ ಮೊದಲು ಆ ಭೂಮಿಯ ಹಿಂದಿನ ಮತ್ತು ಹೊಸ ನಿವಾಸಿಗಳ ಪಟ್ಟಿಯನ್ನು ವಾರ್ಷಿಕ ವರಮಾನದ ವರದಿಯನ್ನು ಸಲ್ಲಿಸಬೇಕಾಗಿತ್ತು. ಇದರ ಆಧಾರದ ಮೇಲೆ ಟಿಪ್ಪು ಗುತ್ತಿಗೆಯನ್ನು ನಿಗಧಿಪಡಿಸಿ ಗುತ್ತಿಗೆ ನೀಡುವಾಗ ಮುಚ್ಚಳಿಕೆ ಅಥವಾ ಭದ್ರತಾ ಪತ್ರವನ್ನು ಬರೆಸಿಕೊಂಡು ಭೂಮಿಯನ್ನು ಗುತ್ತಿಗೆ ಬೇಸಾಯಕ್ಕೆ

ಕೊಡುತ್ತಿದ್ದನು. ಒಂದು ಮೌಜ (ಬೇಸಾಯ ಭೂಮಿ ಒಂದು ಘಟಕ ಹಾಳಾಗಿರುವುದು) ಭೂಮಿಗೆ ಟಿಪ್ಪು ಉತ್ತಮ ಉತ್ಪನ್ನ ಬರುವವರೆಗೆ ಅದಕ್ಕೆ ಕಂದಾಯವನ್ನು ನಿಗಧಿಪಡಿಸುತ್ತಿರಲಿಲ್ಲ. ನಾಲ್ಕು ವರ್ಷಗಳ ನಂತರ ಆ ಭೂಮಿಯಲ್ಲಿ ಬೆಳೆಯುವ ಫಲ ಆಧಾರದ ಮೇಲೆ ಕಂದಾಯವನ್ನು ವಸೂಲಿ ಮಾಡಲಾಗುತ್ತಿತ್ತು.[3]

ಟಿಪ್ಪು ಗುತ್ತಿಗೆ ಭೂಮಿಯನ್ನು ನೀಡಿದಾಗ ಹಲವು ನಿಯಮಗಳನ್ನು ಅನುಸರಿಸುತ್ತಿದ್ದನು. ಗುತ್ತಿಗೆದಾರನು ಅವನ ವಾರಸುದಾರನು ಎಲ್ಲಿಯ ತನಕ ವ್ಯವಸಾಯ ಮಾಡಿ ಬೆಳೆದ ಬೆಳೆಗೆ ಕಂದಾಯ ಕಟ್ಟುತ್ತಾರೋ ಅಲ್ಲಿಯವರೆಗೆ ಅವರಿಗೆ ಅದರ ಮೇಲಿನ ಹಕ್ಕು ಇರುತ್ತಿತ್ತು. ಕಂದಾಯ ಕಟ್ಟಿಲ್ಲದಿದ್ದರೆ, ಭೂಮಿಯನ್ನು ಪಾಳುಬಿಟ್ಟರೆ ಭೂಮಿಯ ಅಧಿಕಾರವನ್ನು ಕಳೆದುಕೊಳ್ಳುತ್ತಿದ್ದರು ಈ ಭೂಮಿಗೆ ಮಳೆಯ ನೀರಿನಿಂದ ಬೇಸಾಯ ಮಾಡಿದರೆ ಅಂತಹ ರೈತರು ಅವರು ಬೆಳೆದ ಬೆಳೆಯ ಮೂರನೇ ಒಂದರಷ್ಟು ಕಂದಾಯವನ್ನು ವಸ್ತು ರೂಪದಲ್ಲಿ ಸಲ್ಲಿಸಬೇಕಾಗಿತ್ತು. ಖುಷ್ಕಿ ಭೂಮಿಯಲ್ಲಿ ಕೆರೆಗಳಿಂದಲೋ ಅಥವಾ ನದಿಗಳಿಂದಲೋ ಒಟ್ಟಿನಲ್ಲಿ ಉತ್ತಮ ನೀರಿನ ವ್ಯವಸ್ಥೆಯಿಂದ ಬೆಳೆಯನ್ನು ಬೆಳೆದರೆ ಅಂತಹ ರೈತರು ಆ ಬೆಳೆಯ ಅರ್ಧದಷ್ಟು ಮೌಲ್ಯವನ್ನು ಕಂದಾಯವಾಗಿ ಕಟ್ಟಬೇಕಿತ್ತು. ಈ ಕಂದಾಯ ಕಟ್ಟುವಾಗ ವಸ್ತು ರೂಪದಲ್ಲಿ ಹೊರತುಪಡಿಸಿ ನಗದು ರೂಪದಲ್ಲಿ ಕಂದಾಯ ಸಂಗ್ರಹಿಸುತ್ತಿದ್ದರು.

ಮನ್ರೋರವರ ಪ್ರಕಾರ "ಸರಕಾರದ ಕಂದಾಯವು ಎಲ್ಲೂ ಮೂರನೆಯ ಒಂದು ಪಾಲಿಗಿಂತಲೂ ಹೆಚ್ಚಾಗಿರಲಿಲ್ಲ ಎಂದು ಹೇಳಿದ್ದಾರೆ".[4] ಅಲ್ಲಿನ ಮಣ್ಣಿನ ಗುಣಮಟ್ಟ, ಭೂಮಿಯ ಸ್ವರೂಪ, ಮಳೆ, ಬೆಳೆಗಳ ಆಧಾರದ ಮೇಲೆ ರೈತರ ಹಿತಾಸಕ್ತಿಯನ್ನು ಗಮನಿಸಿಕೊಂಡು ರೈತರಿಗೆ ಅನೂಕೂಲವಾಗುವ ಹಾಗೂ ತನ್ನ ರಾಜ್ಯದ ಬೊಕ್ಕಸಕ್ಕೂ ಆದಾಯದ ಗಮನವನ್ನು ಇಟ್ಟುಕೊಂಡು ಬೇಸಾಯ ಭೂಮಿಯನ್ನು ಹಂಚಿ ಅದರ ವ್ಯಾಪ್ತಿಯನ್ನು ವಿಸ್ತರಿಸಲಾಗಿತ್ತು. ಬಂಜರು ಭೂಮಿಯ ಬೇಸಾಯ ಬೆಳೆಗೆ ಮೊದಲ ವರ್ಷದಲ್ಲಿ ಯಾವುದೇ ಕಂದಾಯವನ್ನು ಸಂಗ್ರಹಿಸುತ್ತಿರಲಿಲ್ಲ. ಎರಡನೇ ವರ್ಷದಲ್ಲಿ ನಾಲ್ಕನೆಯ ಒಂದು ಭಾಗವನ್ನು, ನಾಲ್ಕನೇ ವರ್ಷಗಳಿಂದ ಮೊದಲೇ ನಿಗಧಿಪಡಿಸಿದ್ದ ದರದಲ್ಲಿ ಕಂದಾಯ ಸಂಗ್ರಹಿಸುತ್ತಿದ್ದರು. ಟಿಪ್ಪು ಕಲ್ಲು ಬಂಡೆಗಳಿಂದ ಕೂಡಿದ ಭೂಮಿಗೆ, ಬಂಜರು ಭೂಮಿಗೆ, ಬೆಟ್ಟಗುಡ್ಡದಂತೆ ಇರುವ ಭೂಮಿಗಳಿಗೆ ಕಂದಾಯದಲ್ಲಿ ಉತ್ತಮ ರಿಯಾಯಿತಿಯನ್ನು ನೀಡಿದ್ದನು.

ಟಿಪ್ಪು ಬಡ ರೈತರಿಗೋಸ್ಕರ ಅವರಿಗೆ ಹಣಕಾಸಿನ ಪರಿಸ್ಥಿತಿ ತಲೆದೋರಿದಾಗ ಅವರಿಗೆ ರೈತರಿಗೆ ನೇಗಿಲನ್ನು ಕೊಳ್ಳಲು, ಬೆಳೆಯ ಬೀಜಗಳನ್ನು ಕೊಳ್ಳಲು 'ತಕ್ಕಾವಿ' ಎಂಬ ಸಾಲಪದ್ಧತಿಯನ್ನು ಅಳವಡಿಸಿಕೊಂಡಿದ್ದನು. ರೈತರ ಕೂಲಿಯನ್ನು ಕೊಡದೆ ದುಡಿಸಿಕೊಂಡ ಸಂದರ್ಭದಲ್ಲಿ ಅಂತಹ ಭೂಮಾಲೀಕರ ಫಸಲನ್ನು ವಶಪಡಿಸಿಕೊಳ್ಳುವ ಅಧಿಕಾರವನ್ನು ಜಾರಿಗೆ ತಂದಿದ್ದನು.[5] ಅಮಿಲ್‌ನು ಮೂರು ಕಂತುಗಳಲ್ಲಿ ಕಂದಾಯವನ್ನು ಸಂಗ್ರಹಿಸುವ ಸಂಧರ್ಭದಲ್ಲಿ ರೈತರನ್ನು ಶೋಷಣೆಗೆ

ಒಳಪಡಿಸಬಾರದಾಗಿತ್ತು. ಶ್ರೀಮಂತ ರೈತರಿಂದ 20 ಪಗೋಡಗಳನ್ನು, ಬಡ ರೈತರಿಂದ 10 ಪಗೋಡಗಳನ್ನು ಸಂಗ್ರಹಿಸಬೇಕಾಗಿತ್ತು. ನೈಸರ್ಗಿಕತೆಯಿಂದ ರೈತನಿಗೆ ನಷ್ಟ ಸಂಭವಿಸಿದ ಸಂದರ್ಭದಲ್ಲಿ ತೆರಿಗೆ ವಿನಾಯಿತಿಯನ್ನು ನೀಡುವುದಾಗಿ ತಿಳಿಸಿದ್ದನು.[6]

ಟಿಪ್ಪು ಸರಕಾರಿ ಅಧಿಕಾರಿಗಳಿಗೆ ಜಹಗೀರುಗಳನ್ನು ನೀಡುತ್ತಿದ್ದನು. ಜಹಗೀರುಗಳಲ್ಲಿ 2 ರೀತಿಯ ಜಹಗೀರುಗಳಿದ್ದವು. ಅವುಗಳೆಂದರೆ ತಂಘಾ ಜಮೀನು, ಈ ಭೂಮಿ ಅವರು ಅನುವಂಶಿಯವಾಗಿ ಬಂದಿರುವಂತದ್ದು ಹಾಗೂ ಮತ್ತೊಂದು ಆಜೀವ ಜಹಗೀರು ಎಂದು ಹೇಳಬಹುದಾಗಿದೆ. ಜಹಗೀರುಗಳನ್ನು ಸರಕಾರಿಯ ಅಧಿಕಾರಿಯ ಸೇವೆಯನ್ನು ಪರಿಗಣಿಸಿ ನೀಡುತ್ತಿದ್ದನು. ಕ್ರಿ.ಶ.1788ರ ಒಂದು ರೆವಿನ್ಯೂ ಸರ್ವೆಯನ್ನು ನಡೆಸಿದ ಟಿಪ್ಪು ಅನಧಿಕೃತವಾದ ಇನಾಂ ಭೂಮಿಗಳನ್ನು ವಶಪಡಿಸಿಕೊಂಡನು. ಅಧಿಕೃತ ಭೂಮಿಗಳನ್ನು ಭೂಮಿಯ ಒಡೆಯನಿಗೆ ಬಿಟ್ಟು ಕೊಟ್ಟನು.

ಟಿಪ್ಪು ಭೂಮಿಯನ್ನು ವರ್ಗೀಕರಿಸಿ ಕಂದಾಯ ನಿಗಧಿಪಡಿಸುತ್ತಿದ್ದನು. ಕಂದಾಯ ಸಂಗ್ರಹಿಸುವಲ್ಲಿ ಪ್ರಮುಖವಾಗಿ ಅಮಿಲ್‌ನನಿಗೆ ವಹಿಸಿದ್ದನು. ಅಮಿಲ್‌ನು ತನ್ನ ಅಧಿಕಾರಕ್ಕೆ ಬರುವಂತಹ ಎಲ್ಲಾ ಪ್ರದೇಶಗಳಲ್ಲಿ ಪ್ರವಾಸ ಮಾಡಿ ರೈತರ ಬೆಳೆಗಳನ್ನು ಪರೀಕ್ಷಿಸಿ ಅದರ ಆದಾಯದ ಮೇಲೆ ಕಂದಾಯವನ್ನು ನಿರ್ಧರಿಸಬೇಕಿತ್ತು. ಕಂದಾಯವನ್ನು ಸಂಗ್ರಹಿಸುವಲ್ಲಿ ವಿಫಲನಾದರೆ ಅಮಿಲ್‌ನೆ ಅದನ್ನು ಭರಿಸಬೇಕಾಗಿತ್ತು. ಕಂದಾಯವನ್ನು ಸಂಗ್ರಹಿಸುವಲ್ಲಿ ತನ್ನ ಕೈಕೆಳಗಿನ ಅಧಿಕಾರಿಗಳು ಭೂಮಿಯನ್ನು ಹಂಚಿ ಅದರಿಂದ ಕಂದಾಯ ಸಂಗ್ರಹಿಸದಿದ್ದಲ್ಲಿ ಅವರಿಗೆ ಶಿಕ್ಷೆಯನ್ನು ವಿಧಿಸಬಹುದಾಗಿದೆಯೆಂದು ಹೇಳಿದ್ದನು.[7]

ಜಮೀನುಗಳನ್ನು ಬೇರೆ ಬೇರೆ ವಿಧಗಳಾಗಿ ವಿಂಗಡಿಸುತ್ತಿದ್ದರು. ಈ ವಿಧಾನದ ಮೇಲೆ ಕಂದಾಯ ದರವನ್ನು ನಿಗದಿಪಡಿಸಿದ್ದನು. ವ್ಯವಸಾಯವನ್ನು ವಿಸ್ತರಿಸುವುದ ಕೊಸ್ಕರ ನಿಯಮಗಳನ್ನು ಅಳವಡಿಸಿಕೊಂಡಿದ್ದನು. ಆ ನಿಯಮಗಳೆಂದರೆ, ಯಾವುದೇ ರೀತಿಯ ಜಮೀನುಗಳಾಗಲಿ ಅಂದರೆ ಹಿಜ್ರಾಭೂಮಿ, ಹಿಸ್ಸಾಭೂಮಿ, ತರಿ, ಖುಷ್ಕಿ ಆಗಲಿ ಈ ಭೂಮಿಯನ್ನು ಹಳೆಯ ಹಾಗೂ ಹೊಸ ರೈತರಿಗೆ ಸಮನಾಗಿ ಹಂಚಬೇಕಾಗಿತ್ತು. ನಿಗದಿಪಡಿಸಿದ ಪ್ರಮಾಣದಲ್ಲಿ ಹಿಸ್ಸಾಭೂಮಿಯಲ್ಲಿ ಬೀಜ ಬಿತ್ತಬೇಕಿತ್ತು. ಬೆಳೆಯಲ್ಲಿ ರಾಜನ ಪಾಲು ಎಂದು ಸಹ ವಿಂಗಡಿಸುತ್ತಿದ್ದರು. ಕೃಷಿಯನ್ನು ವಿಸ್ತಾರ ಮಾಡಿದಂತೆಲ್ಲಾ ಭೂಮಿಯನ್ನು ನೀಡುತ್ತಿದ್ದರು. ಆ ಭೂಮಿಗೆ ಉತ್ತಮವಾಗಿ ಗೊಬ್ಬರ ಹಾಕಿ ವ್ಯವಸಾಯ ಮಾಡುತ್ತಿದ್ದರು. ರೈತರು ಕೊಟ್ಟಿರುವ ಭೂಮಿಯಲ್ಲಿ ಕಡಿಮೆ ಭೂಮಿ ಬಳಸಿ ಕೃಷಿ ಮಾಡದೆ ಪೂರ್ಣವಾಗಿ ಭೂಮಿಯನ್ನು ಬೇಸಾಯ ಮಾಡುವಂತೆ ಒತ್ತಾಯ ಹೇರುತ್ತಿದ್ದರು.[8]

'ಹಿಸ್ಸಾ' ಮತ್ತು 'ಇಜ್ರಾ' ಎಂಬ ಭೂಮಿಯನ್ನು ಗುತ್ತಿಗೆ ನೀಡಿ ಈ ಭೂಮಿಯಿಂದ ಸರ್ಕಾರವು ಹೆಚ್ಚು ಕಂದಾಯ ಪಡೆಯುತ್ತಿತ್ತು. ಗುತ್ತಿಗೆಯನ್ನು ಪಡೆದಿರುವ ರೈತರಿಗೆ ಅವರು ಕೊಡುವ ಕಂದಾಯವನ್ನು ಅವರು ವ್ಯವಸಾಯ ಮಾಡಿ ಬೆಳೆ ತೆಗೆಯುವ ಮೊದಲೇ ಅವರಿಗೆ ಅಮಲ್‌ನು ಕಂದಾಯ ದರವನ್ನು ತಿಳಿಸಿದ್ದನು. ತರಿ ಮತ್ತು ಖುಷ್ಕಿ ಜಮೀನುಗಳಿಗೆ ಅಲ್ಲಿನ ವ್ಯವಸಾಯದ ಉತ್ಪನ್ನಗಳ ಆಧಾರದ ಮೇಲೆ ಕಂದಾಯ ನಿರ್ಧರಿಸುತ್ತಿದ್ದನು. ಮಣ್ಣಿನ ಗುಣಮಟ್ಟವನ್ನು ಪರೀಕ್ಷಿಸಿ ಅದರ ಆಧಾರದ ಮೇಲೆ 4 ವರ್ಗಗಳಾಗಿ ಅಂದರೆ ಮೊದಲನೆ, ಎರಡನೆ, ಮೂರನೆ ಹಾಗೂ ನಾಲ್ಕನೆಯ ಗುಣಮಟ್ಟದ ಭೂಮಿ ಎಂದು ವಿಂಗಡಿಸಿದ್ದನು. ನಾಲ್ಕನೆಯ ಗುಣಮಟ್ಟದ ಮಣ್ಣಿನ ಭೂಮಿಗೆ ಕಡಿಮೆ ಕಂದಾಯವನ್ನು ನಿಗದಿಪಡಿಸಿದ್ದನು.

ಟಿಪ್ಪು ಕಂದಾಯ ನಿರ್ಧಾರಗಳ ಯೋಜನೆಗಳನ್ನು ಅಳವಡಿಸಿಕೊಳ್ಳಬೇಕಾದರೆ ಆ ಪರಿಸರದ ಬಗ್ಗೆ ಸಮೀಕ್ಷೆಯನ್ನು ನಡೆಸಿ ವರದಿ ಸಂಗ್ರಹಿಸಲು ಆಜ್ಞೆ ನೀಡಿದನು. ಈ ಸಮೀಕ್ಷೆಗೆ ಸಂಬಂಧಿಸಿದ ಸಲಹೆಗಳು ಹೀಗಿವೆ. "ನಿಮ್ಮ ಅಧೀನಕ್ಕೆ ಬಂದಿರುವಂತಹ ಜಿಲ್ಲೆಯಲ್ಲಿನ ಹಳ್ಳಿಗಳ ಹೆಸರು, ರೈತರ ಸಂಖ್ಯೆ, ರೈತರ ಕುಟುಂಬ ಸಂಖ್ಯೆ, ಅವರ ಮನೆಯ ನೇಗಿಲುಗಳ ಸಂಖ್ಯೆ, ಬೀಜದ ಗುಣಮಟ್ಟ, ವೃತ್ತಿಪರ ವರ್ಗಗಳು, ಜಾತಿಗಳು ಮತ್ತು ವರ್ಷದ ಜನಸಂಖ್ಯೆಯಲ್ಲಿ ಆಗುವ ಹೆಚ್ಚಳ ಈ ರೀತಿ ವಿವಿಧ ಮಾಹಿತಿಯನ್ನು ಸಂಗ್ರಹಿಸಬೇಕು. ಮಾಹಿತಿ ಸಂಗ್ರಹಿಸುವಾಗ ಯಾರ ವೆಚ್ಚವು ವರಮಾನಕ್ಕಿಂತ ಹೆಚ್ಚಾಗಿದೆ ಅಂತವರಿಗೆ 'ತಕ್ಕಾವಿ' ಸಾಲವನ್ನು ನೀಡಲಾಗುವುದು ಎಂದು ತಿಳಿಸಿ ಹಾಗೂ ಈ ಎಲ್ಲಾ ಮಾಹಿತಿಗೆ ಸಂಬಂಧಿಸಿದವರಿಗೆ ಮಾಹಿತಿ ಅಮಿಲ್‌ನ ಕೆಳಗಿನ ಅಧಿಕಾರಿಗಳು ಮಾಹಿತಿಯನ್ನು ಅಮಿಲ್‌ನನಿಗೆ ತಿಳಿಸಿ ಒಟ್ಟಾರೆ ರಂಜಾನ್ ತಿಂಗಳಿನಲ್ಲಿ ಮಾಹಿತಿಯನ್ನು ಒಪ್ಪಿಸಬೇಕು."[9] ಇಷ್ಟೇ ಅಲ್ಲದೇ ಅಮೀಲ್‌ನು ವಿವಿಧ ಬೆಳೆಯ ರೈತರೊಂದಿಗೆ ಸಂಪರ್ಕವಿದ್ದ ಟಿಪ್ಪು ರೈತರಲ್ಲಿ ಹಣವಿದೆಯೇ, ಬಿತ್ತನೆ ಬೀಜಗಳಿವೆಯೇ, ನೇಗಿಲುಗಳು, ಹಾಗೂ ವ್ಯವಸಾಯಕ್ಕೆ ಉಪಯೋಗವಾಗುವ ಪ್ರಾಣಿಗಳು ಇದ್ದಾವೆಯೇ ಎಂದು ಅಮೀಲ್‌ನಿಂದ ಮಾಹಿತಿಯನ್ನು ಪಡೆದು ರೈತರಿಗೆ ಈ ವಿಷಯಗಳಲ್ಲಿ ಸಮಸ್ಯೆಗಳು ಇದ್ದಲ್ಲಿ ಪರಿಹರಿಸಬೇಕೆಂದು ಅಮಿಲ್‌ನಿಗೆ ತಿಳಿಸಿದ್ದನು. ಪಟೇಲಗಾರರಾಗಲೀ, ಶಾನುಭೋಗರಾಗಲೀ, ಏನಾದರೂ ತಮ್ಮ ಹಳ್ಳಿಗಳಲ್ಲಿ ಕಬ್ಬು ಬೆಳೆಯಲು ಸೂಕ್ತ ಪರಿಸರ ಇದ್ದು ಅದನ್ನು ಬೆಳೆಯದೆ ಹಾಗೆಯೇ ಬಿಟ್ಟರೆ ಅವರಿಗೆ ಬೇರೆ ಊರಿನಲ್ಲಿ ಕಬ್ಬು ಬೆಳೆಗೆ ವಿಧಿಸುತ್ತಿದ್ದ ಕಂದಾಯಕ್ಕಿಂತ ಬೆಳೆಯ ಉತ್ಪಾದನೆಯ ಮೇಲೆ ಹಾಕಿದ ಕಂದಾಯಕ್ಕಿಂತ ಎರಡರಷ್ಟು ತೆರಿಗೆಯನ್ನು ವಿಧಿಸಲಾಗುತ್ತಿತ್ತು.[10]

ಬಂಜರು ಭೂಮಿಯಲ್ಲಿ ಯಾರಾದರೂ ಬೇಳೆಯನ್ನು ಬೆಳೆಯಲು ಕಾಳಜಿ ವಹಿಸಿದರೆ ಅವರಿಗೆ ಟಿಪ್ಪು ಹೆಚ್ಚಿನ ಪ್ರಮಾಣದಲ್ಲಿ ಪ್ರೋತ್ಸಾಹ ನೀಡುತ್ತಿದ್ದನು. ತನ್ನ ಸರಕಾರಿ ಅಧಿಕಾರಿಗಳಿಗೆ ಬಂಜರು ಭೂಮಿಗೆ ಕಂದಾಯದಲ್ಲಿ ರಿಯಾಯಿತಿಯನ್ನು ನೀಡಲು ಹೊರಡಿಸಿದ್ದನು. ಆ ಆದೇಶ ಹೀಗಿದೆ: "ಬಂಜರು ಭೂಮಿಗೆ ಒಪ್ಪಂದವನ್ನು

ರೈತರ ಜೊತೆ ಮಾಡಿಕೊಂಡು ಮೊದಲ ವರ್ಷಕ್ಕೆ ಯಾವುದೇ ಕಂದಾಯವಿರುವುದಿಲ್ಲ. ಎರಡನೇ ವರ್ಷದಲ್ಲಿ ಅರ್ಧ ತೆರಿಗೆಯನ್ನು ನೀಡುವ, ಮೂರನೇ ವರ್ಷದಿಂದ ಪೂರ್ತಿಯಾಗಿ ನಿಗಧಿಪಡಿಸಿರುವ ತೆರಿಗೆಯನ್ನು ಸಂಗ್ರಹಿಸಲಾಗುತ್ತದೆ. ಈ ಭೂಮಿಯಲ್ಲಿ ಬೆಳೆದ ಉತ್ಪನ್ನವನ್ನು ಸರಕಾರ ಮತ್ತು ರೈತರಿಗೆ ಮಾತ್ರ ಸಂಬಂಧಿಸಿದ್ದಾಗಿರುತ್ತದೆ. ಅಷ್ಟೇ ಅಲ್ಲದೇ ಟಿಪ್ಪು ವೀಳ್ಯೆದೆಲೆ, ತೆಂಗು, ಅಡಕೆ ಬೇಸಾಯಕ್ಕೂ ಸಹ ಕಂದಾಯದಲ್ಲಿ ರಿಯಾಯಿತಿ ಇತ್ತು."[11] ಅಡಕೆ ಬೆಳೆಗಾರರಿಗಾಗಿ ಮೊದಲ ಐದು ವರ್ಷ ಕಂದಾಯವನ್ನು ತೆರವುಗೊಳಿಸಿದ್ದನು. ಆರನೇ ವರ್ಷದಿಂದ ನಿಗಧಿತ ದರದ ಅರ್ಧವನ್ನು ಕಟ್ಟಬೇಕಾಗಿತ್ತು.

**5.2 ವಾಣಿಜ್ಯ ಮತ್ತು ವ್ಯಾಪಾರ :**

ಹೈದರ್ ಮತ್ತು ಟಿಪ್ಪು ವ್ಯಾಪಾರ ತಮ್ಮದೇ ಆದ ವಾಣಿಜ್ಯ ನೀತಿಯನ್ನು ಹೊಂದಿದ್ದರು. ಇವರ ಆಡಳಿತದ ವಿವಿಧ ಪ್ರದೇಶಗಳಲ್ಲಿ ಅಗಾಧವಾದ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿ ತೆಂಗು, ಅಡಿಕೆ, ಭತ್ತ, ರಾಗಿ, ಮೆಣಸು, ಗೋಡಂಬಿ, ಏಲಕ್ಕಿ, ಕಾಫೀ, ಎಣ್ಣೆಕಾಳುಗಳು, ಕಬ್ಬು, ವೀಳ್ಯೆದೆಲೆ. ಹಣ್ಣು, ನೀಲಿ (ಇಂಡಿಗು) ತರಕಾರಿ, ಹುಣಸೆ, ನೆಲಗಡಲೆ, ಅರಿಶಿಣ, ಮಾವು, ಹತ್ತಿ, ರೇಷ್ಮೆ, ಜೋಳ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು ಹಾಗೂ ಗೃಹ ಕೈಗಾರಿಕಾ ಉತ್ಪನ್ನಗಳು ವ್ಯಾಪಾರಿ ಸರಕುಗಳು ಆಗಿದ್ದವು.

**ಆಂತರಿಕ ವ್ಯಾಪಾರ :**

**ಸ್ಥಳೀಯ ಸಂತೆ :**

ಹೈದರ್ ಮತ್ತು ಟಿಪ್ಪುವಿನ ಆಡಳಿತದಲ್ಲಿ ವಾರದ ಸಂತೆಗಳು ಅವರ ಆರ್ಥಿಕ ವ್ಯವಸ್ಥೆಯಲ್ಲಿ ಸಾಕಷ್ಟು ಪರಿಣಾಮವನ್ನು ಉಂಟು ಮಾಡಿದವು. ಸಂತೆಗಳನ್ನು ಅವರು ಜನರ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಅನುಕೂಲವಾಗುವ ರೀತಿಯಲ್ಲಿ ಮುಖ್ಯ ಸ್ಥಳಗಳಲ್ಲಿ ಸ್ಥಾಪಿಸಿದ್ದರು. ಸಂತೆಗಳಲ್ಲಿ 1000ಕ್ಕಿಂತ ಹೆಚ್ಚು ಜನ ಸೇರುತ್ತಿದ್ದು ಸಂತೆಗಳು ವಾರಕೊಮ್ಮೆ ನಡೆಯುತ್ತಿತ್ತು. ಸಂತೆಗಳಿಗೆ ಅಕ್ಕಪಕ್ಕದ ರೈತರು ವಾಣಿಜ್ಯ ವಸ್ತುಗಳು, ಆಹಾರ ಬೆಳೆಗಳು, ತೋಟಗಾರಿಕಾ ಬೆಳೆಗಳು, ಗುಡಿ ಕೈಗಾರಿಕಾ ವಸ್ತುಗಳನ್ನು ತಂದು ಮಾರಾಟ ಮಾಡುತ್ತಿದ್ದರು. ಇವರ ಜೊತೆಗೆ ವರ್ತಕರು, ಸಹ ಮಾರಾಟ ಮಾಡುವುದು ಹಾಗೂ ಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿದ್ದರು. ಸಂತೆಗಳಲ್ಲಿ ಹೆಚ್ಚಾಗಿ ಹತ್ತಿ ಬಟ್ಟೆಗಳು, ಕಂಬಳಿಗಳು, ಕಬ್ಬಿಣದ ಸಾಮಾನುಗಳು, ಗುಡಿ ಕೈಗಾರಿಕಾ ವಸ್ತುಗಳು ವ್ಯಾಪಾರ ಸರಕುಗಳಾಗಿ ಕಂಡುಬಂದಿದ್ದವು. ಮೈಸೂರು ರಾಜ್ಯದಲ್ಲಿ ಬಂಗಾಳದಲ್ಲಿ ಇದ್ದ ಹಾಗೇ ಹಾಟೆಗಳೆಂದು ಕರೆಯುವ ಸಣ್ಣ ಪ್ರಮಾಣದ ಮಾರುಕಟ್ಟೆಗಳು ಮೈಸೂರು ರಾಜ್ಯದಲ್ಲಿ ಇರಲಿಲ್ಲ ಎಂದು ಬುಕಾನನ್ ತಿಳಿಸಿದ್ದಾನೆ.[12] ಹಬ್ಬಗಳ ದಿನಗಳಂದು ಉತ್ತಮ ಚಟುವಟಿಕೆಗಳಿಂದ ಸಂತೆಗಳು ಕೂಡಿದ್ದವು. ಸಂತೆಗಳಿಗೆ

ಬರುವ ಸರಕುಗಳ ಮೇಲೆ ಅವುಗಳಿಗೆ ಅದರ ಮೌಲ್ಯದ ಮೇಲೆ ಸುಂಕಗಳನ್ನು ನೀಡಬೇಕಾಗಿತ್ತು. ಹಾಗೆಯೇ ಸಂತೆಗಳಿಗೆ ಮಾರಾಟ ವಸ್ತುಗಳನ್ನು ತಂದಾಗಲೂ ಸಹ ಸಂತೆಯಲ್ಲಿ ಸುಂಕವನ್ನು ಮಾರಾಟಗಾರರು ಕೊಡಬೇಕಾಗಿತ್ತು.

ಸಂತೆಗಳು ತಿಪಟೂರು, ಮುಳಬಾಗಿಲು, ಮಂಡ್ಯ, ಮಳವಳ್ಳಿ, ಹೊಳೆಹೊನ್ನೂರು, ಚಿತ್ರದುರ್ಗ, ತಿರುಪತಿ, ಶಿವಮೊಗ್ಗ, ಬಳ್ಳಾರಿ, ನಿಡಘಟ್ಟ, ಸಾಗರ, ಕೋಲಾರ, ಚಿಕ್ಕಬಳ್ಳಾಪುರ, ಸಾತನೂರು, ಬೆಂಕಿಪುರ, ಗುಬ್ಬಿ, ಮಾಲೂರು, ಕೊರಟಗೆರೆ, ಶಿಕಾರಿಪುರ, ಉರಿಗ, ಮಂಚಿನಾಹಳ್ಳಿ, ಮಾಲೂರು, ಶಿಡ್ಲಘಟ್ಟ, ಜಗಳೂರು, ಹರಿಹರ, ದಾವಣಗೆರೆ, ಶಿರಾಳಕೊಪ್ಪ, ಚಿಂತಾಮಣಿ, ತೆರಕಾಣಾಂಬಿ, ಈರೋಡು, ಗಂಗನೂರುಗಳಲ್ಲಿ ನಡೆಯುತ್ತಿದ್ದವು. ಇಲ್ಲಿ ವಾರಕ್ಕೊಮ್ಮೆ 1000 ಜನಕ್ಕಿಂತ ಹೆಚ್ಚು ಜನಸಂಖ್ಯೆಯು ವ್ಯಾಪಾರ ಚಟುವಟಿಕೆಗಳು ನಡೆಯುತ್ತಿತ್ತು. ಅಷ್ಟೇ ಅಲ್ಲದೆ ತುಮಕೂರು ಜಿಲ್ಲೆಯ ಶಿರಾ, ಗುಬ್ಬಿ, ತುಮಕೂರು, ತುರವೇಕೆರೆ, ಕುಣಿಗಲ್, ಮಧುಗಿರಿ, ಪಾವಗಡ ಮುಂತಾದ ಸ್ಥಳಗಳಲ್ಲಿ ಜನರ ಅನುಕೂಲಕ್ಕೆ ತಕ್ಕಂತೆ ವಿವಿಧ ದಿನಗಳಲ್ಲಿ ಸಂತೆಗಳು ನಡೆಯುತ್ತಿದ್ದವು.[13]

ಸಂತೆಯಲ್ಲಿ ಬಟ್ಟೆ ವ್ಯಾಪಾರದ ಬಗ್ಗೆ ಬುಕಾನನ್ ಈ ರೀತಿ ವಿವರ ನೀಡಿದ್ದಾರೆ. ಶ್ರೀರಂಗಪಟ್ಟಣ, ನಗರ, ಗುಬ್ಬಿ, ಚಿತ್ರದುರ್ಗ, ಚನ್ನರಾಯಪಟ್ಟಣದಲ್ಲಿ ಮುಖ್ಯವಾಗಿ ರೇಷ್ಮೆ ಬಟ್ಟೆಗಳಿಗೆ ಬೇಡಿಕೆ ಹೆಚ್ಚಿದಾಗ ವರ್ತಕರು, ನೇಕಾರರಿಗೆ ಉತ್ಪನ್ನದ ಅರ್ಧ ಅಥವಾ ಸಂಪೂರ್ಣ ಹಣವನ್ನು ಮುಂಗಡವಾಗಿ ಕೊಡುತ್ತಿದ್ದರು. ಬೇಡಿಕೆ ಕಡಿಮೆ ಇದ್ದಾಗ ವರ್ತಕರಿಂದ ನೇಕಾರರು ಬಡ್ಡಿ ಕೊಟ್ಟು ಹಣ ತಂದು ಬಟ್ಟೆ ತಯಾರಿಸುತ್ತಿದ್ದರು. ನೇಕಾರರಿಗೆ ವರ್ತಕರೇ ಹೆಚ್ಚು ಸಂದರ್ಭಗಳಲ್ಲಿ ಕಚ್ಚಾ ರೇಷ್ಮೆಯನ್ನು ಆಮದು ಮಾಡಿ ನಂತರ ವರ್ತಕರ ಏಜೆಂಟರು ನೇಕಾರರಿಂದ ಬಟ್ಟೆಗಳನ್ನು ಖರೀದಿಸಿ ಸಂತೆಗಳಲ್ಲಿ ಮಾರುತ್ತಿದ್ದರು."[14]

ರೇಷ್ಮೆ, ಏಲಕ್ಕಿ, ಅಡಕೆ, ಖರ್ಜೂರ, ಶ್ರೀಗಂಧ, ಇಂಗು, ಸಾಂಬ್ರಾಣಿ, ಸಕ್ಕರೆ, ಕಲ್ಲುಸಕ್ಕರೆ, ತೆಂಗಿನಕಾಯಿ, ಜಾಯಿಕಾಯಿ, ಲವಂಗ, ಕಬ್ಬಿನ ಬೆಲ್ಲ, ತಾಳೆಬೆಲ್ಲ, ತಾಮ್ರ, ಸೀಗೆಕಾಯಿ, ಬಣ್ಣಗಳು, ಬಟ್ಟೆ, ತುಪ್ಪ, ಅಕ್ಕಿ, ಗೋಧಿ, ಹರಳು, ಉಪ್ಪು, ರಾಗಿ, ಹುಣಸೇಹಣ್ಣು, ಮೆಣಸು, ಜೇನುತುಪ್ಪ, ಜೇನುಮೇಣ, ಮರದ ಆಟಿಕೆ ವಸ್ತುಗಳು, ವಿಳ್ಯೇದೆಲೆ ಮುಂತಾದ ವಸ್ತುಗಳು ಸ್ಥಳೀಯ ವ್ಯಾಪಾರ ಚಟುವಟಿಕೆಯಲ್ಲಿ ಸರಕುಗಳಾಗಿ ಕಂಡುಬಂದಿವೆ. ಸುತ್ತಮುತ್ತಲಿನ ಹಳ್ಳಿಗಳಿಂದ ಉತ್ಪಾದನೆ ವಸ್ತುಗಳು ಟಿಪ್ಪು ಸ್ಥಾಪಿಸಿದ ಡಿಪೋಗಳಾದ ಬೆಂಗಳೂರು, ಶ್ರೀರಂಗಪಟ್ಟಣ, ಮೈಸೂರು, ಸತ್ಯಮಂಗಲ, ಮಂಗಳೂರು, ಕೋಲಾರ, ಬಿದನೂರು, ಚಿತ್ರದುರ್ಗ, ಗುರ್‍ರಂಕೊಂಡ, ಕಾರವಾರ, ಭಟ್ಕಳಗಳಿಗೆ ತಲುಪುತ್ತಿದ್ದವು. ಈ ಡಿಪೋಗಳು ಸ್ಥಳೀಯ ಮಟ್ಟದಲ್ಲಿ, ವ್ಯಾಪಾರ ವಾಣಿಜ್ಯ ಚಟುವಟಿಕೆಗಳನ್ನು ನಡೆಸುತ್ತಿದ್ದು, ಮೈಸೂರಿನಲ್ಲಿ ವಾಣಿಜ್ಯ ಬೆಳೆ ಸಮೃದ್ಧವಾಗಿತ್ತು. ಶ್ರೀಗಂಧ, ಅಡಿಕೆ, ವಿಳ್ಯೇದೆಲೆ, ಮೆಣಸು, ಏಲಕ್ಕಿ, ರೇಷ್ಮೆ,

ತೆಂಗಿನಕಾಯಿ, ದಂತ ಇನ್ನೂ ಮುಂತಾದ ವಸ್ತುಗಳು ವ್ಯಾಪಾರ ವಾಣಿಜ್ಯವಾಗಿ ಕಾಣಿಸಿಕೊಂಡಿವೆ.[15] ಬೆಂಗಳೂರು, ಮೈಸೂರು, ಮಂಗಳೂರು, ಶ್ರೀರಂಗಪಟ್ಟಣದಲ್ಲಿ ವ್ಯಾಪಾರ ಚಟುವಟಿಕೆಯನ್ನು ಹೆಚ್ಚು ಬೆಳೆಸಿದ್ದನು. ಹೈದರ್‌ನು ತನ್ನ ಮಗನಿಗೆ ಒಂದು ದಿನ ಬೆಂಗಳೂರು, ಉತ್ತಮ ವ್ಯಾಪಾರ ವಾಣಿಜ್ಯ ಚಟುವಟಿಕೆಯಾಗಿ ಅಭಿವೃದ್ಧಿಗೊಳ್ಳುತ್ತದೆ ಎಂದು ಹೇಳಿದ್ದು ನಿಜವಾಯಿತು. ಬೆಂಗಳೂರಿನ ವ್ಯಾಪಾರ ಚಟುವಟಿಕೆಯಲ್ಲಿ ಅತಿಮುಖ್ಯವಾದ ಅಡಿಕೆ ಶಿವಮೊಗ್ಗದಿಂದ ಆಮದಾಗುತ್ತಿತ್ತು. ಕರಿಮೆಣಸು ಬೆಂಗಳೂರಿಗೆ ಮಂಗಳೂರಿನಿಂದ ಬಂದು ತಲುಪುತ್ತಿತ್ತು. ನಗರದಿಂದ ಉತ್ತಮ ಜಾತಿಯ ಶ್ರೀಗಂಧ ಬೆಂಗಳೂರಿಗೆ ಬರುತ್ತಿತ್ತು. ಹಾಗೆಯೇ ಕೆಲಮಟ್ಟದ ಶ್ರೀಗಂಧ ಕಬ್ಬಾಳ, ದೇವರಾಯನದುರ್ಗದಿಂದ ಬರುತ್ತಿತ್ತು. ಕಂಬಳಿಗಳನ್ನು ಬಿದನೂರು, ಮಧುಗಿರಿ, ಶಿರಾ, ಚಿತ್ರದುರ್ಗಗಳಿಂದ ಆಮದಾಗುತ್ತಿದ್ದವು. ಹಾಗೇ ಬೆಂಗಳೂರಿಗೆ ಬರುವ ಹತ್ತಿಯ ಪ್ರಮಾಣ ದೊಡ್ಡದಾಗಿತ್ತು. ನವಲಗುಂದ, ನರಗುಂದ, ಹುಬ್ಬಳ್ಳಿ, ಅದೋನಿ, ಸವಣೂರು ಪ್ರದೇಶಗಳಿಂದ ಬಂದ ಹತ್ತಿಯನ್ನು ಸ್ಥಳೀಯ ವ್ಯಾಪಾರಿಗಳು ಖರೀದಿಸಿ ಸುತ್ತಲಿನ ಊರುಗಳಿಗೆ ಹೋಗಿ ಚಿಲ್ಲರೆ ವ್ಯಾಪಾರದಲ್ಲಿ ಮಾರುತ್ತಿದ್ದರು. ಶಿವಮೊಗ್ಗ ಜಿಲ್ಲೆಯ ನಗರದಿಂದ ಅಡಿಕೆ, ಕರಿಮೆಣಸು, ಶ್ರೀಗಂಧ, ಏಲಕ್ಕಿ, ತಂಬಾಕು, ಆಹಾರ ಧಾನ್ಯಗಳನ್ನು ಬೆಂಗಳೂರಿಗೆ ಕಳುಹಿಸುತ್ತಿದ್ದರು. ಬೆಂಗಳೂರಿನಿಂದ ಶಿವಮೊಗ್ಗಕ್ಕೆ ಕಾಗದ, ಕಂಬಳಿ, ಬಿದಿರು, ಬಟ್ಟೆಗಳನ್ನು ಕಳುಹಿಸಲಾಗುತ್ತಿತ್ತು.

ಹೊಸಕೋಟೆ ಕೋಲಾರದಿಂದ ಎತ್ತುಗಳನ್ನು ಬೆಂಗಳೂರಿನ ಮೂಲಕ ಗುಬ್ಬಿಗೆ ಕಳುಹಿಸಿಕೊಡಲಾಗುತ್ತಿತು. ಗುಬ್ಬಿಯಿಂದ ಬೆಂಗಳೂರಿಗೆ ಅಡಿಕೆ, ತೆಂಗು, ಅರಿಶಿಣ, ಮೆಣಸು ಆಮದಾಗುತ್ತಿತ್ತು. ಶ್ರೀರಂಗಪಟ್ಟಣದಿಂದ ಏಲಕ್ಕಿ, ಶ್ರೀಗಂಧ, ಬೆಲ್ಲ, ಕರಿಮೆಣಸು ಬೆಂಗಳೂರಿಗೆ ತಲುಪುತ್ತಿತ್ತು. ಬೆಂಗಳೂರಿನಿಂದ ಶ್ರೀರಂಗಪಟ್ಟಣಕ್ಕೆ ಜವಳೀ ರವಾನೆಯಾಗುತ್ತಿತ್ತು. ದೊಡ್ಡಬಳ್ಳಾಪುರವು ಉತ್ತಮ ಕೆಂಪುಬಟ್ಟೆಯನ್ನು ಕಳುಹಿಸುತ್ತಿತ್ತು. ಬೆಂಗಳೂರಿಗೆ ಕೋಲಾರವು ನಾಮಗೊಂಡ್ಲುವಿನಿಂದ ಸಕ್ಕರೆ, ಕಲ್ಲುಸಕ್ಕರೆ, ಬೆಲ್ಲ ಬೆಂಗಳೂರಿಗೆ ಕಳುಹಿಸಲಾಗುತ್ತಿತ್ತು. ಕೋಲಾರಕ್ಕೆ ಬೆಂಗಳೂರಿನಿಂದ ಮೆಣಸು, ಅಡಿಕೆ, ರವಾನೆಯಾಗುತ್ತಿತ್ತು. ಮಂಗಳೂರಿಗೆ ಬೆಂಗಳೂರಿನಿಂದ ಹತ್ತಿಬಟ್ಟೆ ರವಾನೆಯಾಗುತ್ತಿತ್ತು.[16] ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ಪ್ರಖ್ಯಾತ ವ್ಯಾಪಾರ ಸ್ಥಳವಾಗಿತ್ತು. ಇಲ್ಲಿ ನಡೆಯುವ ಸಂತೆಗಳಿಗೆ ಕೇರಳ ಮತ್ತು ಕೊಡಗು ಪ್ರದೇಶಗಳಿಂದ ವರ್ತಕರು ಆಗಮಿಸುತ್ತಿದ್ದರು.

**ಹೊರರಾಜ್ಯ ಹಾಗೂ ವಿದೇಶಿ ವ್ಯಾಪಾರ ವಾಣಿಜ್ಯ :**

ಹೈದರಲಿ ಮತ್ತು ಟಿಪ್ಪು ತಮ್ಮ ವ್ಯಾಪಾರಿ ಕೋಠಿಗಳನ್ನು ಮಸ್ಕತ್, ಪುಣೆ, ಪಗಾರ, ಮದರಾಸು, ಕಚ್, ಪಾಂಡೀಚೆರಿ, ಕರ್ನೂಲ್, ಉತ್ಮತ್ ಮಾಹೆ, ರಾಯಚೂರು, ಹುಮನಾಬಾದ್‌ಗಳಲ್ಲಿ ಸ್ಥಾಪಿಸಿಕೊಂಡು ಭಾರತದ ವಿವಿಧ

ಪ್ರದೇಶಗಳಾದ ತಮಿಳುನಾಡು, ಬಂಗಾಳ, ಗುಜರಾತ್, ಕೇರಳ ಮುಂತಾದ ಸ್ಥಳಗಳೊಂದಿಗೆ ಹಾಗೂ ಹೊರ ದೇಶಗಳಾದ ಚೈನಾ, ಬರ್ಮಾ, ಅರೇಬಿಯಾ ಮತ್ತು ಮಧ್ಯ ಪ್ರಾಚ್ಯ ದೇಶಗಳೊಂದಿಗೆ, ಪಶ್ಚಿಮದ ತುರ್ಕಿ ಸಾಮ್ರಾಜ್ಯದೊಂದಿಗೆ ವ್ಯಾಪಾರ ವಾಣಿಜ್ಯ ಸಂಪರ್ಕ ಏರ್ಪಡಿಸಿಕೊಂಡಿದ್ದನು. ಹಾಗೆಯೇ ತನ್ನ ರಾಜ್ಯದಲ್ಲಿ 30 ವ್ಯಾಪಾರ ಮತ್ತು ವಾಣಿಜ್ಯ ಡಿಪೋಗಳನ್ನು ಸ್ಥಾಪಿಸಿದನು. ಅವುಗಳೆಂದರೆ ಬೆಂಗಳೂರು, ಶ್ರೀರಂಗಪಟ್ಟಣ, ಮಂಗಳೂರು, ಕಾರವಾರ, ಸತ್ಯಮಂಗಲ, ಬಿದನೂರು, ಶಿಕಾರಿಪುರ, ಕಲ್ಲಿಕೋಟೆ, ಭಟ್ಕಳ, ಬನವಾಸಿ, ಚಿತ್ರದುರ್ಗ, ಕೊಲಾರ, ಪುಂಗನೂರು ಇನ್ನೂ ಮುಂತಾದವು.[17] ಆರ್ಕಾಟಿನ ನವಾಬರ ರಾಜ್ಯದಿಂದ ಗಾಜಿನ ಸಾಮಾನು, ಕಬ್ಬಿಣ ಸಾಮಾಣು, ಕಾಗದ ಬೆಂಗಳೂರಿಗೆ ಬರುತ್ತಿತ್ತು. ಬಂಗಾಳದಿಮ್ದ ಉಣ್ಣೆ, ರೇಷ್ಮೆ, ಹತ್ತಿ ಬಟ್ಟೆ, ಕಂಬಳಿ, ಕಾಗದ, ಉಪ್ಪು ಬೆಂಗಳೂರಿಗೆ ಬರುತ್ತಿತ್ತು. ಚೀನಾದಿಂದ ಬಾದಾಮಿ, ಸಕ್ಕರೆ, ಖರ್ಜೂರ ತರಿಸುತ್ತಿದ್ದನು. ಗುಜರಾತಿನ ವ್ಯಾಪಾರಿಗಳು ಮದರಾಸಿನಲ್ಲಿ ನೇಕಾರ ವ್ಯಾಪಾರವನ್ನು ನಡೆಸುತ್ತಿದ್ದರು. ರಾಜ್ಯದ ವಿವಿಧ ಪ್ರದೇಶಗಳಿಮ್ದ ಕಲ್ಲಿಕೋಟೆಗೆ ಬಣ್ಣ ಬಣ್ಣದ ವಸ್ತುಗಳನ್ನು ತೆಗೆದುಕೊಂಡು ಹೋಗಲಾಗುತ್ತಿತ್ತು. ಪುಣೆಯ ಕೆಲವು ಗೋಸಾಬಿ ವ್ಯಾಪಾರಿಗಳು ಕಾಶ್ಮೀರದಿಂದ ಸಾಯಿ ಮತ್ತು ಕೇಸರಿಗಳನ್ನು ಬೆಂಗಳೂರಿಗೆ ತರುತ್ತಿದ್ದರು. ಸೂರತ್ ಪ್ರದೇಶದಿಂದ ಪರ್ಷಿಯಾದ ಮುತ್ತುಗಳನ್ನು ಬೆಂಗಳೂರಿನ ಪ್ರದೇಶದಲ್ಲಿ ಮಾರುತ್ತಿದ್ದರು.[18] ದಕ್ಷಿಣ ಕನ್ನಡ ಜಿಲ್ಲೆಯು ಹೆಚ್ಚು ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳನ್ನು ಒಳಗೊಂಡಿತ್ತು. ಇಲ್ಲಿ ಹೊನ್ನಾವರ, ಭಟ್ಕಳ, ಮಂಗಳೂರು, ಮೂಡಬಿದರೆ, ಕಾರ್ಕಳ, ವೇಣೂರು, ಟಾರ್ಕೂರು, ಬಸ್ರೂರು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು.[19] ಮಂಗಳೂರು, ಕರ್ನಾಟಕದ ಅತಿದೊಡ್ಡ ಬಂದರಾಗಿದ್ದು ಮುಂಬೈ ಮತ್ತು ಕೊಚ್ಚಿಗಳ ನಡುವೆ ಸಮುದ್ರ ಸಂಪರ್ಕವನ್ನು ಹೊಂದಿತ್ತು. ಈ ಬಂದರಿನಿಂದ ಕಬ್ಬಿಣ, ಮೆಣಸು, ಹೆಂಚು, ಗೋಡಂಬಿ, ಕಾಫೀಬೀಜ, ಮೀನಿನ ಉತ್ಪನ್ನಗಳು, ತೆಂಗು, ಏಲಕ್ಕಿ, ಮ್ಯಾಂಗನೀಸ್, ಮರದ ದಿಮ್ಮಿಗಳ ಮರಮುಟ್ಟು ಇನ್ನೂ ಮುಂತಾದ ವಸ್ತುಗಳು ವಿದೇಶಿಗಳಿಗೆ ರಫ್ತಾಗುತ್ತಿತ್ತು. ಟಿಪ್ಪು ಫ್ರಾನ್ಸ್, ತುರ್ಕಿ, ಆಫ್ಘಾನಿಸ್ತಾನ, ಇರಾನ್‌ಗಳೊಡನೆ ಸಂಪರ್ಕವನ್ನು ಬೆಳೆಸಿದ್ದನು. ಮೈಸೂರು ಸಂಸ್ಥಾನದ ವಸ್ತುಗಳಿಗೆ ವಿದೇಶದಲ್ಲಿ ಅಪಾರ ಬೇಡಿಕೆಯಿತ್ತು. ಆದಕಾರಣ ಚೀನಾ, ಮಸ್ಕತ್ ಅರ್ಮೇನಿಯಾ, ಆರ್ಮೂಜ್, ಪೆಗು, ಬಿದ್ದಾ ಇನ್ನೂ ಮುಂತಾದ ವಿದೇಶಗಳೊಡನೆ ದಕ್ಷಿಣ ಕನ್ನಡ ಜಿಲ್ಲೆಯ ಬಂದರುಗಳಿಂದ ವಾಣಿಜ್ಯ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದನು. ಹೀಗೆ ಹೊರರಾಜ್ಯ ಹಾಗೂ ವಿದೇಶಗಳೊಡನೆ ವ್ಯಾಪಾರ ವಾಣಿಜ್ಯ ಸಂಪರ್ಕವನ್ನು ಹೊಂದಿದ್ದರು.

**ವಾಣಿಜ್ಯ :**

**ವಿವಿಧ ಪ್ರದೇಶಗಳ ವಾಣಿಜ್ಯ ಬೆಳೆಗಳ ಪಟ್ಟಿ**[20]

| ಜಿಲ್ಲೆಗಳು | ಪ್ರಮುಖ ವಾಣಿಜ್ಯ ಬೆಳೆಗಳು |
|---|---|
| ಮಂಡ್ಯ, ಮೈಸೂರು | ಕಬ್ಬು, ಭತ್ತ, ರಾಗಿ |
| ಬೆಂಗಳೂರು | ಹಣ್ಣು, ಎಣ್ಣೆಕಾಳುಗಳು, ತರಕಾರಿ, ತೆಂಗು, ನೀಲಿ |
| ಕೋಲಾರ, ತುಮಕೂರು, ಚಿತ್ರದುರ್ಗ | ನೆಲಗಡಲೆ, ಹುಣಸೆ, ಇತರೆ ಎಣ್ಣೆಕಾಳುಗಳು |
| ಗುರ್ರಂಕೊಂಡ, ಕಡಪ, ಕರ್ನೂಲ್ | ಜೋಳ, ಭತ್ತ, ನೆಲಗಡಲೆ, ಹತ್ತಿ |
| ರಾಯಚೂರು, ಧಾರವಾಡ | ಎಣ್ಣೆಕಾಳು, ಹತ್ತಿ, ಮೆಣಸಿನಕಾಯಿ |
| ಮಲಬಾರ್ | ಮೆಣಸು, ಅಡಿಕೆ, ತೆಂಗು |
| ಮಂಗಳೂರು, ಕಾರವಾರ | ಮೆಣಸು, ತೆಂಗು, ಅಡಿಕೆ, ಮೆಣಸು, ಗೋಡಂಬಿ, ಭತ್ತ |
| ಕೃಷ್ಣಗಿರಿ, ಧರ್ಮಪುರಿ, ದಿಂಡಿಗಲ್ಲು | ಹುಣಸೆ, ಭತ್ತ |
| ಬಳ್ಳಾರಿ | ಅರಿಶಿಣ, ಅಡಿಕೆ, ತೆಂಗು, ಹುಣಸೆ, |
| ಚಿಕ್ಕಮಗಳೂರು, ಶಿವಮೊಗ್ಗ | ಕಾಫೀ, ಅಡಿಕೆ, ಭತ್ತ |
| ಕೊಡಗು | ಏಲಕ್ಕಿ, ಭತ್ತ |

ಈ ಪ್ರದೇಶಗಳಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ.

ಟಿಪ್ಪು ಆರ್ಥಿಕವಾಗಿ ಅಭಿವೃದ್ಧಿ ಹೊಂದುವ ಉದ್ದೇಶಕ್ಕಾಗಿ ನೆರೆಹೊರೆ ದೇಶಗಳೊಂದಿಗೆ ಉತ್ತಮ ವಾಣಿಜ್ಯ ಸಂಪರ್ಕಗಳನ್ನು ಬೆಳೆಸಿಕೊಂಡು ತನ್ನ ರಾಜ್ಯಕ್ಕೆ ವಿದೇಶಿ ವರ್ತಕರನ್ನು ಹಾಗೂ ರಾಜರನ್ನು ಆಕರ್ಷಿಸುತ್ತಿದ್ದನು. ಟಿಪ್ಪು ಹಾಗೂ ವಸ್ತುಗಳ ಮೇಲೆ ವಿಧಿಸುತ್ತಿದ್ದ ಸುಂಕವನ್ನು ತೆರವುಗೊಳಿಸುತ್ತಿದ್ದನು. ಟಿಪ್ಪು ಅರ್ಮೇನಿಯಾದ ವ್ಯಾಪಾರಿ ಯುರೋಬ್‌ನಿಗೆ ಕ್ರಿ.ಶ. 1781ರಲ್ಲಿ ಜನವರಿ 16 ರಂದು ಪತ್ರ ಬರೆದನು. ಅದರಲ್ಲಿ "ವ್ಯಾಪಾರದ ಮೇಲೆ ನಾವು ವಸ್ತುಗಳ ಸುಂಕವನ್ನು ಸಂಪೂರ್ಣವಾಗಿ ತೆರವುಗೊಳಿಸಿದ್ದೇವೆ. ಈ ಕಾರಣದಿಂದಲೂ ತಾವುಗಳು ನಮ್ಮ ಮೇಲಿನ ಉತ್ತಮ ವಿಶ್ವಾಸದಿಂದ ನೀವು ನಮ್ಮ ರಾಜ್ಯಗಳಿಗೆ ಬಂದು ಸಮುದ್ರದ ಮೂಲಕ ಅಥವಾ ಭೂಮಾರ್ಗದ ಮೂಲಕ ನಿಮಗೆ ಸಂತೋಷವಾಗುವ ವಿಧಾನದಿಂದ ಯಾವ ವಸ್ತುಗಳನ್ನಾದರೂ ಕೊಳ್ಳುವ ಹಾಗೂ ಮಾರಾಟ ಮಾಡಲ ಅವಕಾಶ ಕಲ್ಪಿಸಿಕೊಡುತ್ತೇವೆ. ಅಷ್ಟೇ ಅಲ್ಲದೆ ನಿಮಗೆ ಸ್ಥಳದಲ್ಲಿ ವಸತಿ ಮಾರಾಟ

ಮಾಡಲು ಅವಕಾಶ ಕಲ್ಪಿಸಿಕೊಡುತ್ತೇವೆ. ನಿಮಗೆ ಕಾರ್ಮಿಕರು ಅಥವಾ ಕೆಲಸಗಾರರ ಅವಶ್ಯಕತೆ ಇದ್ದಲ್ಲಿ ನಾವು ಒದಗಿಸಿ ಕೊಡುತ್ತೇವೆ" ಎಂದು ಹೇಳಿದ್ದನು. ಇದೇ ರೀತಿಯಾಗಿ ಟಿಪ್ಪು ಮತ್ತೊಬ್ಬ ಷೇಕ್ ಮಹಮದ್ ಎಂಬ ಇನ್ನೊಬ್ಬ ವರ್ತಕನಿಗೆ ಕ್ರಿ.ಶ. 1785 ರಲ್ಲಿ ಜನವರಿ 28ನೇ ತಾರೀಖು ಅವನಿಗೆ ಭರವಸೆಯನ್ನು ನೀಡುತ್ತಾನೆ. ಅದರ ವಿವರಣೆ ಹೀಗಿದೆ : "ನಿಮ್ಮ ಸರಕುಗಳ ಮೇಲೆ ಇರುವ ಸುಂಕ ಎಲ್ಲಾ ರೀತಿಯಲ್ಲಿ ತೆರವುಗೊಳಿಸುತ್ತೇನೆ. ನೀವು ಬಂದಾಗ ನಿಮ್ಮ ವಿಷಯಗಳಿಗೆ ಅನುಗುಣವಾಗಿ ನಿಮ್ಮ ಇಚ್ಚೆ ತಕ್ಕಂತೆ ನಡೆದುಕೊಳ್ಳುತ್ತೇವೆ ಹಾಗೂ ನಿಮಗೆ ರಕ್ಷಣೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತೇವೆ. ನೀವು ವ್ಯಾಪಾರ ಕೋಠಿಗಳನ್ನು ನಿರ್ಮಿಸಿಕೊಳ್ಳಲು ನೀವು ಇಚ್ಚಿಸುವ ಸೂಕ್ತವಾದ ಸ್ಥಳವನ್ನು ನೀಡಲಾಗುತ್ತದೆ ಹಾಗೂ ನಿಮಗೆ ಹಣದ ಅವಶ್ಯಕತೆ ಕಂಡುಬಂದರೆ ಹಣವನ್ನು ನೀಡುತ್ತೇವೆ. 2 ವರ್ಷಗಳ ಕಾಲ ಗಳಿಸುವ ಲಾಭವೆಲ್ಲ ನಿಮ್ಮದಾಗಿರುತ್ತದೆ" ಎಂದು ಹೇಳುತ್ತಾನೆ.[21]

ಈ ರೀತಿಯ ಸೌಲಭ್ಯ ಹಾಗೂ ರಿಯಾಯಿತಿಗಳನ್ನು ನೀಡುವುದರಿಂದ ಟಿಪ್ಪು ತನ್ನ ಸಾಮ್ರಾಜ್ಯದ ವರ್ತಕರಿಗೂ ವಿದೇಶದಲ್ಲಿ ಅದೇ ರೀತಿಯ ಸೌಲಭ್ಯ ದೊರೆಯುತ್ತದೆ ಹಾಗೂ ನಮ್ಮ ಆಡಳಿತದ ಪ್ರದೇಶಗಳ ಸರಕುಗಳ ವಸ್ತುಗಳಿಗೆ ಒಳ್ಳೆಯ ಬೇಡಿಕೆ ಇರುತ್ತದೆ ಎಂದುಕೊಂಡಿದ್ದನು. ಹಾಗೂ ವಸಾಹತುಗಾರರು ಮೈಸೂರು ರಾಜ್ಯಕ್ಕೆ ಬಂದು ವ್ಯಾಪಾರ ಮೇಲೆ ಹಿಡಿತ ಸಾಧಿಸಿದಂತೆ ಮಾಡುವುದು ಅವನ ಗುರಿಯಾಗಿತ್ತು.

ಟಿಪ್ಪು ಯುರೋಪಿನ ರಾಷ್ಟ್ರಗಳು ಹಾಗೂ ಇಂಗ್ಲೀಷರು ತಮ್ಮ ವ್ಯಾಪಾರ ಮತ್ತು ವಾಣಿಜ್ಯದ ಮೇಲೆ ಹಿಡಿತ ಹೊಂದಬಾರದು ಎಂದು ಹೇಳಿ ವ್ಯಾಪಾರ ಸಂಪರ್ಕಗಳನ್ನು ಬೇರೆ ರಾಷ್ಟ್ರಗಳೊಂದಿಗೆ ಬೆಳೆಸಿಕೊಳ್ಳುತ್ತಾ ಬ್ರಿಟಿಷ್ ವಾಣಿಜ್ಯ ಮತ್ತು ವ್ಯಾಪಾರಗಳ ಮೇಲೆ ನಿರ್ಬಂಧಕ್ಕೆ ಒಳಪಡಿಸುತ್ತಿದ್ದನು, ಕರಿಮೆಣಸಿನಿಂದ ಬ್ರಿಟೀಷರಿಗೆ ಬಾರಿ ವಾಣಿಜ್ಯ ಕ್ಷೇತ್ರದಲ್ಲಿ ಪೆಟ್ಟಾಗಿತ್ತು. ಯುರೋಪಿನಲ್ಲಿ ಶ್ರೀಗಂಧ ಮತ್ತು ಏಲಕ್ಕಿಗೆ ತುಂಬಾ ಬೇಡಿಕೆಯಿತ್ತು. ಟಿಪ್ಪು ಶ್ರೀಗಂಧವನ್ನು ಚೈನಾ ದೇಶಕ್ಕೂ, ಏಲಕ್ಕಿಯನ್ನು ಅರೇಬಿಯಾ ಮತ್ತು ಮಧ್ಯ ಪ್ರದೇಶಗಳಿಗೆ ರಫ್ತು ಮಾಡುತ್ತಿದ್ದನು. ಇದರಿಂದಾಗಿ ಕರಿಮೆಣಸಿನ ಬೆಲೆಯು ದುಬಾರಿಯಾಯಿತು. ಸ್ಥಳೀಯ ರಾಜರು ಅದರ ಪ್ರಯೋಜನವನ್ನು ಪಡೆದುಕೊಂಡರು.

ಟಿಪ್ಪು ವಿದೇಶಗಳಲ್ಲಿ ವಾಣಿಜ್ಯ ಕೇಂದ್ರಗಳನ್ನು ಸ್ಥಾಪಿಸುವ ಆಸೆಯನ್ನು ಹೊಂದಿದ್ದನು. ಅಂತಹ ವ್ಯವಸ್ಥೆಯನ್ನು ಕೈಗೊಳ್ಳುವಂತೆ ತನ್ನ ಅಧಿಕಾರಿಗಳಿಗೆ ಹೇಳಿ ಅಲ್ಲಿ ಅನುಮತಿಯನ್ನು ಪಡೆದುಕೊಳ್ಳುವ ಹಾಗೂ ವಾಣಿಜ್ಯ ಸಂಪರ್ಕದ ವ್ಯವಸ್ಥೆಗಳ ಒಪ್ಪಂದವನ್ನು ಸಿದ್ಧಪಡಿಸಿಕೊಳ್ಳುವಂತೆ ಆಜ್ಞೆ ನೀಡುತ್ತಿದ್ದನು. ಅಷ್ಟೇ ಅಲ್ಲದೆ ಇಂತಹ ವ್ಯವಹಾರವನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುವುದಕ್ಕೆ ವ್ಯಾಪಾರ ಪ್ರತಿನಿಧಿಗಳನ್ನು ನೇಮಕ ಮಾಡಿಕೊಳ್ಳುತ್ತಿದ್ದನು.

**ವಾಣಿಜ್ಯ ಕಾರ್ಯ ವ್ಯವಸ್ಥೆ :**

ಟಿಪ್ಪು ತನ್ನ ವಾಣಿಜ್ಯ ವ್ಯಾಪಾರವನ್ನು ಸುವ್ಯವಸ್ಥಿತವಾಗಿ ಉತ್ತಮ ಪಡಿಸಿಕೊಂಡು ನಿರಂತರವಾಗಿ ಅಭಿವೃದ್ಧಿಯನ್ನು ಸಾಧಿಸಲು 1793–1794ರಲ್ಲಿ ವಾಣಿಜ್ಯ ವಿಭಾಗ ಅಥವಾ ವಾಣಿಜ್ಯ ಮಂಡಳಿಯನ್ನು ಸ್ಥಾಪಿಸಿಕೊಂಡನು. ಅದಕ್ಕೆ ಸದಸ್ಯರನ್ನು ನೇಮಕ ಮಾಡಿದ್ದು ಅವರನ್ನು ವಾಣಿಜ್ಯ ಸಾವರಗಳ ಪ್ರಭರಿಗಳು ಎಂದು ಕರೆಯುತ್ತಿದ್ದರು. 9 ಜನರು ಸದಸ್ಯರಾಗಿದ್ದರು. ಇವರು ವಸ್ತುಗಳ ನಿರ್ವಹಣೆ, ಜವಾಬ್ದಾರಿಯ ಜೊತೆಗೆ ಟಿಪ್ಪುವಿನ ಪ್ರದೇಶಗಳಲ್ಲಿ ವಿದೇಶಿ ವರ್ತಕರು ಬಂದು ವ್ಯಾಪಾರ ವಾಣಿಜ್ಯವನ್ನು ಕೈಗೊಳ್ಳುವಂತೆ ಮಾಡುವ ಜವಾಬ್ದಾರಿಯನ್ನು ಹೊಂದಿದ್ದರು. ಮಂಡಳಿಯ ಸದಸ್ಯರು ತಪ್ಪು ಮಾಡಿದಾಗ ಕಠಿಣ ಶಿಕ್ಷೆಗೆ ಗುರಿಪಡಿಸುತ್ತಿದ್ದನು.

**ವಾಣಿಜ್ಯದ ಮಂಡಳಿಯ ಧ್ಯೇಯೋದ್ದೇಶಗಳು :**

1. ಸರಕು ವಸ್ತುಗಳಾದ ರೇಷ್ಮೆ, ಅವಲಕ್ಕಿ, ಕರಿಮೆಣಸು, ಅಕ್ಕಿ, ಶ್ರೀಗಂಧ ಮುಂತಾದವುಗಳನ್ನು ಆಮದು ಮಾಡುವ ಹಾಗೂ ರಫ್ತು ಮಾಡುವ ಉದ್ದೇಶಗಳಿಂದ ಕೊಂಡುಕೊಳ್ಳುವುದು.
2. ವಿವಿಧ ದೇಶದ ವರ್ತಕರನ್ನು ತನ್ನ ಆಡಳಿತದ ಪ್ರದೇಶಗಳಿಗೆ ಆಕರ್ಷಿಸುವುದು.
3. ವ್ಯಾಪಾರಿ ಕೋಠಿಗಳಿಗೆ ಉತ್ತಮ ವ್ಯಕ್ತಿಗಳನ್ನು ನೇಮಕ ಮಾಡಿ ಅಧಿಕಾರಗಳನ್ನು ಹಂಚುವುದು.
4. ಸಭೆಗಳ ನಡವಳಿಕೆಗಳ ವರದಿಗಳನ್ನು ಸುಲ್ತಾನನಿಗೆ ಸರಿಯಾದ ಸಮಯಕ್ಕೆ ತಿಳಿಸುವುದು.
5. ಕರ್ತವ್ಯಗಳನ್ನು ಪ್ರಾಮಾಣಿಕವಾಗಿ ಮಾಡುವುದು ಹಾಗೂ ಯಾರು ತಪ್ಪು ಮಾಡಿದಾಗ ಅಂತಹ ವಿಚಾರವನ್ನು ಸುಲ್ತಾನನ ಗಮನಕ್ಕೆ ತಂದು ಶಿಕ್ಷೆಯನ್ನು ಕೊಡಿಸಿ ಪ್ರಜೆಗಳಿಗೆ ಅನುಕೂಲವಾಗುವಂತೆ ಮಾಡುವುದು.
6. ವ್ಯಾಪಾರದ ವಿಚಾರಗಳನ್ನು ಎಲ್ಲರೂ ಚರ್ಚಿಸಿ ನಿರ್ಧಾರ ಕೈಗೊಳ್ಳುವುದು.

ಇನ್ನೂ ಮುಂತಾದ ಧ್ಯೇಯೋದ್ದೇಶಗಳನ್ನು ಈ ಮಂಡಳಿಗಳು ಒಳಗೊಂಡಿತ್ತು.[22] ಟಿಪ್ಪು ವಾಣಿಜ್ಯ ಕಾರ್ಯವ್ಯವಸ್ಥೆ ತನ್ನ ಮಂಡಳಿಗೆ ವ್ಯಾಪಾರ ಕೋಠಿಗಳನ್ನು ನಿರ್ಮಿಸಿಕೊಳ್ಳಲು ತಿಳಿಸಿದನು. ಟಿಪ್ಪು ವ್ಯಾಪಾರ ವಾಣಿಜ್ಯಕ್ಕೋಸ್ಕರ 17 ವ್ಯಾಪಾರ ಕೋಠಿಗಳನ್ನು ಪ್ರಾರಂಭಿಸಿದನು. ಅವುಗಳೆಂದರೆ ಮಸ್ಕತ್, ಮದರಾಸು, ಪಾಂಡಿಚೇರಿ, ಕಚ್, ಪುಣೆ, ಕರ್ನೂಲು, ಹುಮನಾಬಾದ್ ಇನ್ನೂ ಮುಂತಾದವು. ತನ್ನ ವಾಣಿಜ್ಯಕೋಠಿಗಳಲ್ಲಿ 3 ರೀತಿಯ ನೌಕರರನ್ನು ನೇಮಿಸಿಕೊಂಡಿದ್ದನು.

ಟಿಪ್ಪು ಹೊರ ರಾಜ್ಯದಲ್ಲಿ ಸ್ಥಾಪಿಸಿದ್ದ ವಾಣಿಜ್ಯ ಕೇಂದ್ರಗಳಲ್ಲಿ ಮಸ್ಕತ್‌ನಲ್ಲಿದ್ದ 2 ವ್ಯಾಪಾರ ಕೋಠಿಗಳು ಪ್ರಮುಖವಾಗಿದ್ದವು. ಟಿಪ್ಪು ಇಂಗ್ಲೀಷರಿಗೆ ವ್ಯಾಪಾರದಲ್ಲಿ ಪೆಟ್ಟು ಕೊಡುವ ಗುರಿ ಹೊಂದಿದ್ದನು. ಆದಕಾರಣ ರಾವ್‌ಸೇಠ್ ಎನ್ನುವವನ ಮಗ ಮಯೋಸೇಟ್ ಎಂಬ ವರ್ತಕನು ಕಲ್ಲಿಕೋಟೆಯಲ್ಲಿ 1 ಸಂಸ್ಥೆಯನ್ನು ಪ್ರಾರಂಭಿಸಲು ಟಿಪ್ಪುವನ್ನು ಅನುಮತಿಗೆ ಕೋರಿದಾಗ ಟಿಪ್ಪು ಅನುಮತಿ ನೀಡುವುದರ ಜೊತೆಗೆ ಒಪ್ಪಂದವನ್ನು ಮಾಡಿಕೊಂಡರು. ಮಸ್ಕತ್‌ಗೆ ವ್ಯಾಪಾರ ಕೇಂದ್ರಗಳಿಗೆ ಅಕ್ಕಿಯನ್ನು ರಫ್ತು ಮಾಡುವಾಗ ನಮ್ಮ ಅನುಮತಿ ಇಲ್ಲದೇ ಪೋರ್ಚುಗೀಸರಿಗಾಗಲೀ, ಇಂಗ್ಲೀಷರಿಗಾಗಲೀ, ಡಚ್‌ರಿಗಾಗಲೀ ಯಾವುದೇ ಯುರೋಪಿಯನ್ನರಿಗೆ ಅದನ್ನು ಮಾರಾಟ ಮಾಡುವಂತಿಲ್ಲ ಎಂದು ಹೇಳಿದನು. ಇಂಗ್ಲೀಷರು ಹಿಡಿತ ಸಾಧಿಸಿಲ್ಲದ ಪ್ರದೇಶದ ಮೇಲೆ ವಾಣಿಜ್ಯ ಸಂಪರ್ಕ ಏರ್ಪಡಿಸಿಕೊಳ್ಳುವುದು ಅವನ ಗುರಿಯಾಗಿತ್ತು. ಹಾಗಾಗಿ ಟರ್ಕಿ ಸುಲ್ತಾನನೊಂದಿಗೆ ವಾಣಿಜ್ಯ ಸಂಪರ್ಕ ಬೆಳೆಸಿ ತನ್ನ ರಾಯಭಾರಿಗಳಿಗೆ ಕೊಲ್ಲಿ ಪ್ರದೇಶಗಳಲ್ಲಿ ವಾಣಿಜ್ಯ ರಿಯಾಯಿತಿ ದೊರೆಯುವಂತೆ ಮಾಡಿಕೊಂಡನು. ಹೀಗೆ ವ್ಯಾಪಾರ–ವಾಣಿಜ್ಯವು ಅಭಿವೃದ್ಧಿಯನ್ನು ಹೊಂದಿ ರಾಜ್ಯದ ಆರ್ಥಿಕ ಪರಿಸ್ಥಿತಿ ನಿಭಾಯಿಸಲು ಸಹಕಾರಿಯಾಗಿದ್ದವು.

**ಕೊನೆ ಟಿಪ್ಪಣಿಗಳು :**

---

1 ಬಿ.ಎಲ್.ರೈಸ್, ಮೈಸೂರು ಗ್ಯಾಜಿಟಿಯರ್, ಸಂಪುಟ–1, 1897. ಪು.595.

2 ವಿಲ್ಕ್, 'ರಿಪೋರ್ಟ್ ಆನ್‌ದಿ ಇಂಟೀರಿಯರ್ ಅಡ್ಮಿನಿಸ್ಟ್ರೇಷನ್ ರಿಸೋಸ್ ಎಕ್ಸ್ಪೆಂಡೀಚರ್ ಆಫ್ ಗೌರ್‍ನಮೆಂಟ್ ಆಫ್ ಮೈಸೂರ್', 1805, ಪು.5–6.

3 ಷೇಕ್ ಅಲಿ, ಬಿ., 'ಕರ್ನಾಟಕ ಚರಿತ್ರೆ', ಸಂ.5, 1997, ಪು.450.

4 ಗ್ಲೀಗ್, 'ದಿ ಲೈಫ್ ಆಫ್ ಸರ್ ಥಾಮಸ್ ಮನ್ರೋ', ಸಂ–1, 1830, ಪು.404–406.

5 ಷೇಕ್ ಅಲಿ, ಬಿ., 'ಕರ್ನಾಟಕ ಚರಿತ್ರೆ', ಸಂ, 5, 1997, ಪು.451.

6 ಅದೇ, ಪು.452.

7 ಅದೇ, ಪು.453.

8 ಅದೇ, ಪು.454.

9 ಅದೇ, ಪು.455.

10 ಅದೇ, ಪು.457.

11 ಅದೇ, ಪು.457.

12 ಪ್ರಾನ್ಸಿಸ್ ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆಂಡ್ ಮಲಬಾರ್', ಸಂ.1, 1807, ಪು.27.

13 ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.57–58.

14 ಪ್ರಾನ್ಸಿಸ್ ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆಂಡ್ ಮಲಬಾರ್', ಸಂ.1, 1807, ಪು.147–148.

15 ಶೇಷಗಿರಿರಾವ್, ಎಲ್.ಎಸ್., 'ಬೆಂಗಳೂರು ದರ್ಶನ', ಸಂ.1, 2005, ಪು.32–33.

16 ಅದೇ, ಪು.32–33.

17 ಷೇಕ್ ಆಲಿ, ಬಿ., 'ಕರ್ನಾಟಕ ಚರಿತ್ರೆ', ಸಂ.5, 1997, ಪು.472.

[18] ಶೇಷಗಿರಿರಾವ್, ಎಲ್.ಎಸ್., 'ಬೆಂಗಳೂರು ದರ್ಶನ', ಸಂ.1, 2005, ಪು.32–33.

[19] ಗೋಪಾಲ್, ಆರ್. (ಸಂ.), 'ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2007, ಪು.95.

[20] ಪಾಲಾಕ್ಷ, 'ಸಮಗ್ರ ಕರ್ನಾಟಕ ಇತಿಹಾಸ', 1979, ಪು.51.

[21] ಷೇಕ್ ಆಲಿ, ಬಿ., 'ಕರ್ನಾಟಕ ಚರಿತ್ರೆ', ಸಂ.5, 1997, ಪು.465–466.

[22] ಅದೇ, ಪು.470.

## ಅಧ್ಯಾಯ–6

# ಉಪಸಂಹಾರ

ಮೈಸೂರು ಸಂಸ್ಥಾನದಲ್ಲಿ ಆಳ್ವಿಕೆ ನಡೆಸಿದ ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಅವರ ಆಡಳಿತದ ಪ್ರದೇಶದಲ್ಲಿ ಕೃಷಿಯನ್ನು ಬಿಟ್ಟರೆ ಅಂದಿನ ಅವರ ಆರ್ಥಿಕ ಪ್ರಗತಿಗೆ ಕೈಗಾರಿಕೆಗಳೇ ಪ್ರಧಾನವಾಗಿದ್ದವು. ಇವರು ಹಿಂದಿನ ರಾಜರುಗಳಿಗಿಂತ ಕೈಗಾರಿಕಾಭಿವೃದ್ಧಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದರು. ಬೆಂಗಳೂರು, ಕೋಲಾರ, ದೊಡ್ಡಬಳ್ಳಾಪುರ, ತುಮಕೂರು, ಗಂಜಾಂ, ಮೈಸೂರು, ಮಂಡ್ಯ, ಶಿವಮೊಗ್ಗ, ಚನ್ನಪಟ್ಟಣ, ಚಿತ್ರದುರ್ಗ, ಶಿವಮೊಗ್ಗ ಮುಂತಾದ ಪ್ರದೇಶಗಳಲ್ಲಿ ವಿವಿಧ ತಯಾರಿಕಾ ವಸ್ತುಗಳ ತಯಾರಿಕಾ ಕೈಗಾರಿಕೆಗಳನ್ನು ಸ್ಥಾಪಿಸಿ ವಿಸ್ತರಿಸಿದರು. ಎಲ್ಲಿ ಕಚ್ಚಾವಸ್ತುಗಳು ಅಧಿಕ ಪ್ರಮಾಣದಲ್ಲಿ ದೊರೆಯುತ್ತವೆ ಹಾಗೂ ಕೃಷಿ ಚಟುವಟಿಕೆಗಳು ಮತ್ತು ಜನಭರಿತ ಪ್ರದೇಶಗಳಿವೆಯೋ ಅಲ್ಲಿ ಆಮದು ಮತ್ತು ರಫ್ತು ಚಟುವಟಿಕೆಗೆ ಅನುಕೂಲವಾಗುವಂತೆ ಮತ್ತು ತಮ್ಮ ಆಡಳಿತಕ್ಕೆ ಅನುಕೂಲವಾಗುವಂತೆ ಕೈಗಾರಿಕೆಗಳನ್ನು ಸ್ಥಾಪಿಸಿ ಅವುಗಳನ್ನು ಅಭಿವೃದ್ಧಿಗೊಳಿಸಲು ಸೂಕ್ತ ಕ್ರಮಗಳನ್ನು ಕೈಗೊಂಡರು. ಇವರ ಕಾಲದಲ್ಲಿ ಕೃಷಿ ಆಧಾರಿತ ಕೈಗಾರಿಕೆಗಳು ಹೆಚ್ಚಾಗಿ ಕಂಡುಬಂದವು. ಅವುಗಳೆಂದರೆ, ರೇಷ್ಮೆ ನೂಲು ಮತ್ತು ರೇಷ್ಮೆ ಬಟ್ಟೆ, ಹತ್ತಿ ಬಟ್ಟೆ, ಉಣ್ಣೆ ಬಟ್ಟೆ, ಎಣ್ಣೆ ತಯಾರಿಕೆ, ಬೆಲ್ಲ, ಸಕ್ಕರೆ, ಕಲ್ಲುಸಕ್ಕರೆ ಮುಂತಾದವು. ಖನಿಜ ಸಂಪನ್ಮೂಲಗಳ ಆಧಾರಿತ ಕೈಗಾರಿಕೆಗಳೆಂದರೆ, ಕಬ್ಬಿಣ ಮತ್ತು ಉಕ್ಕು, ಬಂದೂಕು, ಫಿರಂಗಿ, ತುಪಾಕಿ, ಕೋವಿ, ಯುದ್ಧದ ಕತ್ತಿ, ಭರ್ಜಿ ಮುಂತಾದವು. ಕಬ್ಬಿಣದ ಗೃಹಪಯೋಗಿ ವಸ್ತುಗಳು, ಕೃಷಿ ಚಟುವಟಿಕೆಯ ಕಬ್ಬಿಣದ ಉಪಕರಣಗಳು, ಕಂಚು ಮತ್ತು ತಾಮ್ರದಿಂದ ವಿವಿಧ ವಸ್ತುಗಳ ತಯಾರಿಕೆ, ಮುಂತಾದವು. ಹಾಗೆಯೇ ಪ್ರಾಣಿ ಮತ್ತು ನೈಸರ್ಗಿಕ ವಸ್ತುಗಳ ಅವಲಂಬಿತ ಕೈಗಾರಿಕೆಗಳಾದ ಚರ್ಮದ ಹದ ಮಾಡುವಿಕೆ, ಚಪ್ಪಲಿ, ಚರ್ಮದ ವಿವಿಧ ವಸ್ತುಗಳ ತಯಾರಿಕೆ, ಬಿದಿರಿನಿಂದ ಮಾಡಿದ ಬುಟ್ಟಿಗಳು, ರೇಷ್ಮೆ ತಟ್ಟೆ, ರೇಷ್ಮೆಚಂದ್ರಿಕೆ, ಮೀನು ಹಿಡಿಯುವ ವಸ್ತು, ಬಿದಿರಿನ ಗೃಹೋಪಯೋಗಿ ವಸ್ತುಗಳು, ಮರದ ಗಾಡಿಗಳು, ಕಲ್ಲುಗಾರಿಕೆ, ಮಡಿಕೆ ಮುಂತಾದವುಗಳು ಅಸ್ತಿತ್ವದಲ್ಲಿದ್ದವು.

ಹೈದರ್ ಮತ್ತು ಟಿಪ್ಪುಸುಲ್ತಾನ್ ಕಾಲದಲ್ಲಿ ಬಟ್ಟೆ ತಯಾರಿಕೆಯ ಕೈಗಾರಿಕೆಗಳು ಹೆಚ್ಚಾಗಿ ಕಂಡುಬಂದಿವೆ. ಇದರಿಂದ ಹೇಳಬಹುದಾದ ಅಂಶವೆಂದರೆ, ಟಿಪ್ಪು ಬಟ್ಟೆ ತಯಾರಿಕೆಗೆ ಹೆಚ್ಚಿನ ಆಸಕ್ತಿಯನ್ನು ನೀಡಿದ್ದಾನೆ. ಈ ಕೈಗಾರಿಕೆಯು ಸಂಪದ್ಭರಿತವೂ ಮತ್ತು ವೈಶಿಷ್ಟ್ಯಪೂರ್ಣವಾದ ಕೈಗಾರಿಕೆಯಾಗಿದ್ದೂ, ರೇಷ್ಮೆಬಟ್ಟೆ ಅಭಿವೃದ್ಧಿಗೋಸ್ಕರ ಟಿಪ್ಪು ರೇಷ್ಮೆ ತಯಾರಿಕೆಗೆ ಸಂಬಂಧಿಸಿದಂತೆ ಬಂಗಾಳಕ್ಕೆ ತನ್ನ ರಾಜ್ಯದ ಜನರನ್ನು

ಕಳುಹಿಸಿ ತರಬೇತಿಯನ್ನು ಕೊಡಿಸಿದನು. ಹಾಗೂ ರೇಷ್ಮೆ ತಳಿಗಳನ್ನು ಚೈನಾದಿಂದ ತರಿಸಿದನು. ರೇಷ್ಮೆಬಟ್ಟೆಯಿಂದ ಪಟ್ಟೆಸೀರೆ, ಪಟ್ಟೆಕಿರಿಗೆ, ಪಟ್ಟೆಕುಪ್ಪಸ, ಪಟ್ಟೆದೋತ್ರ, ಪಟ್ಟೆಖಚ್ಚೆಖಾನ, ಪಟ್ಟೆಪಗ್ಗು, ಪಟ್ಟಶಾಲುನಾಮ ಮುಂತಾದವುಗಳನ್ನು ಹಾಗೂ ರೇಷ್ಮೆ ಜೊತೆಗೆ ಹತ್ತಿ ಮಿಶ್ರಣ ಮಾಡಿ ಕಿರಿಗೆ, ಸೀರೆ, ಕುಪ್ಪಸ, ಖಚ್ಚೆಖಾನ ಮುಂತಾದವುಗಳನ್ನು ತಯಾರಿಸುತ್ತಿದ್ದರು. ರೇಷ್ಮೆ ಬಾರ್ಡರ್ ಇರುವ ಹಸಿರು ಬಣ್ಣದ ಹತ್ತಿಬಟ್ಟೆಗಳೆಂದರೆ, ಹಸಿರುಸೀರೆ, ಹಸಿರು ಕಿರಿಗೆ, ಹಸಿರು ಕುಪ್ಪಸ ಈ ರೀತಿಯ ಬಟ್ಟೆಗಳನ್ನು ಪಟ್ಟಗಾರರು ಉತ್ಪಾದಿಸುತ್ತಿದ್ದರು. ಹತ್ತಿಬಟ್ಟೆಗಳಿಂದ ಸಾದಾಕಿಲ್ಲಾ, ಬಿಳಿಪಗ್ಲು, ಅಷ್ಟಕಂಬಿ, ದತ್ತೂ ಎಂಬ ಬಟ್ಟೆಗಳನ್ನು ಸಾಲೆಗಾರರು ಮತ್ತು ಶಾನುಗಾರರು ತಯಾರಿಸುತ್ತಿದ್ದರು. ಕೆಂಪಂಚಿನ ಹತ್ತಿಬಟ್ಟೆಯಿಂದ ರುಮಾಲು, ಸೀರೆ, ದೋತ್ರ ಬಟ್ಟೆಗಳನ್ನು ತೊಗಟರು ತಯಾರಿಸುತ್ತಿದ್ದರು. ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಪಾರ್ಕ್‌ಲ್ಲಾ ಎಂಬ ಒರಟಾದ ಬಟ್ಟೆಯನ್ನು ವಳ್ಳಿಯರು ಎಂಬ ಜನಾಂಗದವರು ತಯಾರಿಸುತ್ತಿದ್ದರು. ಬಟ್ಟೆ ತಯಾರಿಕೆಯಲ್ಲಿ ಪಟ್ಟಗಾರರು ಸಾಲೆಗಾರರು, ಶಾನುಗಾರರು, ವಳ್ಳಿಯರು ಎಂಬ ವರ್ಗಗಳು ತಮ್ಮನ್ನು ತೊಡಗಿಸಿಕೊಂಡಿದ್ದರು.[1] ಬಟ್ಟೆತಯಾರಿಕೆಗೆ ಅಭಾವವಿದ್ದಾಗ ಹೊರರಾಜ್ಯದಿಂದ ಉಣ್ಣೆಯನ್ನು ಆಮದು ಮಾಡಿಕೊಳ್ಳುತ್ತಿದ್ದರು. ಬಟ್ಟೆ ತಯಾರಿಕೆಗೆ ಸಿಗುವ ಕಚ್ಚಾವಸ್ತುಗಳನ್ನು ಉತ್ತಮವಾಗಿ ಬಳಸಿಕೊಂಡು ಬುದ್ಧಿವಂತಿಕೆಯಿಂದ ನೇಕಾರರು ಎಲ್ಲಾ ವರ್ಗದ ಜನರಿಗೆ, ಜಾತಿಗಳಿಗೆ ಮತ್ತು ಅವರ ಅಂತಸ್ತಿಗೆ ತಕ್ಕಂತೆ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಇದು ಅವರ ಕುಶಲತೆಯನ್ನು ತಿಳಿಸುತ್ತದೆ.

ಟಿಪ್ಪುವಿಗೆ ಬ್ರಿಟೀಷರು ಹಾಗೂ ನೆರೆಹೊರೆ ರಾಜ್ಯದ ರಾಜರುಗಳು ಶತ್ರುಗಳಾಗಿದ್ದು ಟಿಪ್ಪುಸ್ತುಲಾನ್‌ನನ್ನು ಹೆಚ್ಚು ಯುದ್ಧದಲ್ಲಿ ತೊಡಗಿರುವಂತೆ ಮಾಡಿದ್ದರು. ಇದರಿಂದ ರಾಜ್ಯದ ಪ್ರದೇಶಗಳನ್ನು ರಕ್ಷಿಸಿಕೊಳ್ಳಬೇಕೆಂದು ಬಟ್ಟೆ ಕೈಗಾರಿಕೆಗಳ ನಂತರ ಯುದ್ಧದ ಉಪಕರಣದ ತಯಾರಿಕಾ ಕಾರ್ಖಾನೆಗಳಿಗೆ ಆಸಕ್ತಿಯನ್ನು ನೀಡಿ ತನ್ನ ಆಡಳಿತದ ಪ್ರಮುಖ ಸ್ಥಳಗಳಲ್ಲಿ ಪ್ರೋತ್ಸಾಹಿಸಿದನು. ಕಬ್ಬಿಣ ಮತ್ತು ಉಕ್ಕು ತಯಾರಿಸುವವರಿಗೆ ಹೆಚ್ಚು ಹಣವನ್ನು ಪಾವತಿಸುತ್ತಿದ್ದನು. ಕಬ್ಬಿಣದಿಂದ ಕಬ್ಬಿಣದ ನೇಗಿಲುಗಳು, ಫಿರಂಗಿ, ಬಂದೂಕು, ಕೋವಿ, ತುಪಾಕಿಗಳನ್ನು ಹಾಗೂ ಕತ್ತಿಗಳು, ಕಬ್ಬಿಣದ ಕೃಷಿ ಉಪಕರಣಗಳು, ಗೃಹಪಯೋಗಿ ವಸ್ತುಗಳು ಮುಂತಾದವುಗಳನ್ನು ತಯಾರಿಸುತ್ತಿದ್ದರು. ಫಿರಂಗಿಗಳು ತಯಾರಿಕಾ ಯಂತ್ರವನ್ನು ಫ್ರೆಂಚ್ ವಿನ್ಯಾಸಕಾರನು ತಯಾರಿಸಿದ್ದನು. ಅದನ್ನು ಬುಕಾನನ್ ನೋಡಿರುವುದಾಗಿ ಹೇಳಿದ್ದಾನೆ.[2] ಶ್ರೀರಂಗಪಟ್ಟಣದಲ್ಲಿ 1,000 ತೋಪುಗಳು, 5 ಲಕ್ಷ ಬಂದೂಕಿನ ಗುಂಡುಗಳು ಹಾಗೂ 60,000 ಬಂದೂಕುಗಳು ಕಂಡುಬಂದಿದ್ದವು.[3] ಯುದ್ಧೋಪಕರಣಗಳಲ್ಲೆ ಅತ್ಯಂತ ವಿಶೇಷವಾದ ಅಂಶವೆಂದರೆ ರಾಕೆಟ್ ತಯಾರಿಕೆ. ಟಿಪ್ಪು ಯುದ್ಧಗಳಲ್ಲಿ ರಾಕೆಟ್ ಬಳಸಿದನು. ಇದು ಪ್ರಸ್ತುತ ದಿನಗಳಲ್ಲಿ ಈ ಕ್ಷೇತ್ರಕ್ಕೆ

ಇದೊಂದು ಅತ್ಯುತ್ತಮವಾದ ಕೊಡುಗೆಯಾಗಿದೆ. ಟಿಪ್ಪು ರಾಕೆಟ್ ತಯಾರಿಕೆಗೆ ಬೆಂಗಳೂರನ್ನು ಪ್ರಮುಖ ಕೇಂದ್ರಸ್ಥಳವನ್ನಾಗಿ ಮಾಡಿಕೊಂಡಿದ್ದನು.

ಕೃಷಿ ಆಧಾರಿತ ಕೈಗಾರಿಕೆಗಳಲ್ಲಿ ಕಬ್ಬನ್ನು ಬಳಸಿಕೊಂಡು ಆಲೆಮನೆಗಳನ್ನು ಸ್ಥಾಪಿಸಿ ಬೆಲ್ಲ ಮತ್ತು ಸಕ್ಕರೆ, ಕಲ್ಲುಸಕ್ಕರೆಯನ್ನು ತಯಾರಿಸುತ್ತಿದ್ದರು. ಬೆಲ್ಲ, ಸಕ್ಕರೆ ತಯಾರಿಕೆಗೆ ಸಂಬಂಧಿಸಿದಂತೆ ವೈಜ್ಞಾನಿಕ ವಿಧಾನವು ರೈತರಿಗೆ ಹೆಚ್ಚು ಅನುಕೂಲವಾಗಿರಲಿಲ್ಲ. ಏಕೆಂದರೆ ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಕಬ್ಬನ್ನು ಅರೆಯಲು ಮರದ ಗಾಣಗಳನ್ನು ಬಳಸಿಕೊಳ್ಳುತ್ತಿದ್ದರು. ಇದರಿಂದಾಗಿ ಕಬ್ಬಿನ ಸಿಪ್ಪೆಯಲ್ಲಿಯೇ ಶೇ.40ಗಿಂತ ಹೆಚ್ಚು ಕಬ್ಬಿನ ರಸ ಅದರಲ್ಲೆ ಉಳಿದುಬಿಡುತ್ತಿತ್ತು. ಇದರಿಂದಾಗಿ ಕಬ್ಬು ಬೆಳೆ ರೈತರಿಗೆ ಅನಾನುಕೂಲವಾಗಿತ್ತು. ಕಾಲನಂತರ ವೈಜ್ಞಾನಿಕ ಪ್ರಗತಿಯಿಂದಾಗಿ ಇಂದು ಯಂತ್ರಗಳು ಬಂದಿರುವುದನ್ನು ನೋಡಬಹುದಾಗಿದೆ. ಆದರೆ ಮರದ ಗಾಣವು ಅವನತಿಯತ್ತ ಸಾಗಿರುವುದು ಕಂಡುಬಂದಿದೆ. ಕೃಷಿಯ ಸಾಂಸ್ಕೃತಿಕ ಚಟುವಟಿಕೆಯನ್ನು ಮುಂದಿನ ಜನಾಂಗಕ್ಕೆ ಪರಿಚಯಿಸಬೇಕಾಗಿರುವುದರಿಂದ ಅವುಗಳನ್ನು ರಕ್ಷಿಸಿ ಬಳಸುವ ಕಾರ್ಯವನ್ನು ಮಾಡಬೇಕಾಗಿದೆ. ಯಾವ ಪ್ರದೇಶದಲ್ಲಿ ಕಬ್ಬನ್ನು ಹೆಚ್ಚು ಬೆಳೆಯಲಾಗುತ್ತಿತ್ತೋ ಅಂತಹ ಪ್ರದೇಶಗಳಲ್ಲಿ ಹೆಚ್ಚಾಗಿ ಬೆಲ್ಲದ ಆಲೆಮನೆಗಳು ಕಂಡುಬಂದಿವೆ. ಉದಾ: ಮಂಡ್ಯ, ಮದ್ದೂರು, ಶ್ರೀರಂಗಪಟ್ಟಣ, ಬಿದನೂರು, ಇಕ್ಕೇರಿ ಇನ್ನೂ ಮುಂತಾದವು.

ನೈಸರ್ಗಿಕವಾಗಿ ದೊರೆಯುವ ಬಿದಿರಿನ ಸಹಾಯದಿಂದ ರೇಷ್ಮೆ ತಯಾರಿಕಾ ತಟ್ಟೆ, ರೇಷ್ಮೆ ಹುಳು ಸಾಕಾಣಿಕೆಯ ಚಂದ್ರಿಕೆ, ಚಾಪೆ, ಬುಟ್ಟಿಗಳು, ಇನ್ನೂ ಮುಂತಾದ ವಸ್ತುಗಳನ್ನು ತಯಾರಿಸುತ್ತಿದ್ದರು. ಶಿವಮೊಗ್ಗದಲ್ಲಿ ಬಿದಿರಿನ ಉತ್ಪನ್ನಗಳು ಹೆಚ್ಚಾಗಿದ್ದವು. ಏಕೆಂದರೆ, ಶಿವಮೊಗದಲ್ಲಿ ನೈಸರ್ಗಿಕವಾಗಿ ಬಿದಿರು ಹೆಚ್ಚಾಗಿ ಕಂಡುಬಂದಿದೆ. ಶಿವಮೊಗ್ಗದಿಂದ ವಿವಿಧ ಪ್ರದೇಶಗಳಿಗೆ ಬಿದಿರು ರಫ್ತು ಆಗುತ್ತಿತ್ತು. ಪ್ರಸ್ತುತ ದಿನಗಳಲ್ಲಿಯೂ ಸಹ ಮಂಡ್ಯ ಜಿಲ್ಲೆಗೆ ಬಿದಿರು ಶಿವಮೊಗ್ಗದಿಂದ ಆಮದಾಗುತ್ತದೆ. ಮಂಡ್ಯದಲ್ಲಿ ರೇಷ್ಮೆ ತಯಾರಿಕೆಗೆ ಬಳಸುವ ಉಪಕರಣಗಳಾದ ಬಿದಿರಿನ ತಟ್ಟೆ ಮತ್ತು ಚಂದ್ರಿಕೆಗಳನ್ನು ತಯಾರಿಸಲು ಶಿವಮೊಗ್ಗದ ಬಿದಿರುಗಳನ್ನು ಹೆಚ್ಚಾಗಿ ಉಪಯೋಗಿಸತ್ತಿದ್ದಾರೆ.

ಕುಂಬಾರಿಕೆಯು ಸಮಾಜದ ಒಂದು ಪ್ರಮುಖ ಉದ್ಯಮವಾಗಿತ್ತು. ಕುಂಬಾರರು ಮಡಿಕೆ, ಹೂವಿನಕುಂಡ, ಮಣ್ಣಿನತಟ್ಟೆ, ಬಾನಿ, ಊಟದಪಾತ್ರೆ, ಗೌರಿಗಣೇಶ ಪ್ರತಿಮೆಗಳು ಮುಂತಾದವುಗಳನ್ನು ತಯಾರಿಸುವುದಲ್ಲದೆ ಬಗೆಬಗೆಯ ವಿವಿಧ ಆಕಾರಗಳಲ್ಲಿ ಮಡಿಕೆಗಳನ್ನು ತಯಾರಿಸುವ ಉತ್ತಮ ಕೌಶಲವನ್ನು ಹೊಂದಿದ್ದರು. ಆದರೆ ಇಂದು ಕುಂಬಾರಿಕೆ ಉತ್ಪನ್ನಗಳಿಗೆ ಬೇಡಿಕೆಯಿಲ್ಲವಾಗಿ ಕುಂಬಾರರು ತಮ್ಮ ವೃತ್ತಿಯನ್ನು ಕಡಿಮೆ ಮಾಡಿಕೊಂಡಿರುವುದು ಬೆಳಕಿಗೆ ಬಂದಿದೆ. ಮಡಿಕೆಗಳನ್ನು ಬಳಸುವ ಬದಲು ಪ್ಲಾಸ್ಟಿಕ್ ಮತ್ತು ವಿವಿಧ ಲೋಹದ ವಸ್ತುಗಳನ್ನು

ಗೃಹಪಯೋಗಿ ವಸ್ತುಗಳಲ್ಲಿ ಅಧಿಕವಾಗಿ ಬಳಸುತ್ತಿರುವುದು ಕುಂಬಾರ ವೃತ್ತಿ ಅಳಿವಿನಂಚಿಗೆ ಬಂದಿರುವುದಕ್ಕೆ ಸಾಕ್ಷಿಯಾಗಿದೆ.

ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಎತ್ತಿನ ಗಾಡಿಗಳು ಅಧಿಕ ಪ್ರಮಾಣದಲ್ಲಿ ಕಂಡುಬಂದಿವೆ. ವಸ್ತುಗಳ ಸಾಗಾಣಿಕೆಗೆ ಎತ್ತಿನ ಗಾಡಿಗಳನ್ನು ಹೆಚ್ಚಾಗಿ ಬಳಸುತ್ತಿದ್ದರಿಂದ ಎತ್ತಿನ ಗಾಡಿಗಳನ್ನು ಹೆಚ್ಚಾಗಿ ತಯಾರಿಸುತ್ತಿದ್ದರು. ಒಂದು ಕಾರ್ಖಾನೆ ವರ್ಷಕ್ಕೆ 30 ರಿಂದ 50 ಗಾಡಿಗಳನ್ನು ತಯಾರಿಸುತ್ತಿದ್ದದ್ದು ಒಂದು ಉತ್ತಮ ಸಾಧನೆಯಾಗಿದೆ. ಮರದ ಗಾಡಿಗಳು ರೈತರಿಗೆ ಹಾಗೂ ವ್ಯಾಪಾರಿಗಳಿಗೆ ಅನುಕೂಲಕರವಾಗಿದ್ದವು.[4]

ಮತ್ತೊಂದು ಪ್ರಮುಖ ಉದ್ಯಮವೆಂದರೆ ಎಣ್ಣೆ ತಯಾರಿಕೆ, ಅರಮನೆ, ದೇವಸ್ಥಾನ, ಕೋಟೆಗಳು, ಮನೆಗಳಲ್ಲಿ ಎಣ್ಣೆದೀಪಗಳನ್ನು ಉರಿಸುತ್ತಿದ್ದರಿಂದ ಎಣ್ಣೆ ತಯಾರಿಕೆಗೆ ಟಿಪ್ಪು ಪ್ರೋತ್ಸಾಹ ನೀಡಲಾಗಿತ್ತು. ವಿವಿಧ ಸಸಿಗಳ ಬೀಜಗಳಾದ ಹಿಪ್ಪೆ, ಹೊಂಗೆ, ಅರಳು ಮುಂತಾದವುಗಳಿಂದ ಹೆಗ್ಗಾಣಿಗರು ಎಂಬ ಜನಾಂಗ ಎತ್ತುಗಳನ್ನು ಕಲ್ಲಿನ ಗಾಣಕ್ಕೆ ಕಟ್ಟಿ ಎಣ್ಣೆ ತೆಗೆಯುತ್ತಿದ್ದರು. ಹೈದರಾಲಿ ಮತ್ತು ಟಿಪ್ಪುವಿನ ಪ್ರಮುಖ ಆಡಳಿತ ಪ್ರದೇಶದಲ್ಲಿ ಹಾಗೂ ಅವರ ನೆರೆಹೊರೆ ಪ್ರದೇಶ, ಅಧಿಕ ಜನವಾಸ ಸ್ಥಳಗಳಲ್ಲಿ ಎಣ್ಣೆ ತಯಾರಿಕೆ ಗಾಣಗಳಿದ್ದವು. ಉದಾಹರಣೆಗೆ, ಪಾಂಡವಪುರ, ತೊಣ್ಣೂರು ಮುಂತಾದ ಪ್ರದೇಶಗಳಲ್ಲಿ ಎಣ್ಣೆ ತಯಾರಿಸಲಾಗುತ್ತಿತ್ತು.

ಲೋಹದ ವಸ್ತುಗಳ ತಯಾರಿಕೆಯಲ್ಲಿ ಮೈಸೂರು ಸಂಸ್ಥಾನ ಉತ್ತಮ ಸ್ಥಾನವನ್ನು ಪಡೆದುಕೊಂಡಿತ್ತು. ಭೋಗಾರ ಮೊದಲಾದ ವರ್ಗಗಳು ಲೋಹಗಳಿಂದ ಅಡಿಗೆಪಾತ್ರೆ, ಬಿಂದಿಗೆ, ಲೋಟ, ತಟ್ಟೆ, ಘಂಟೆ, ದೀಪದ ಕಂಬಗಳು, ದೇವರ ವಿಗ್ರಹಗಳು, ಪ್ರಾಣಿಗಳ ಆಕಾರಗಳು ಇನ್ನೂ ಮುಂತಾದ ವಸ್ತುಗಳನ್ನು ತಯಾರಿಸುತ್ತಿದ್ದರು. ಈ ಕಾಲದಲ್ಲಿ ಹಳೆಯ ಲೋಹದ ವಸ್ತುಗಳನ್ನು ಕರಗಿಸಿ ಪುನರ್ ಬಳಕೆ ಮಾಡಿಕೊಳ್ಳುವುದು ಒಂದು ಉತ್ತಮವಾದ ಕಾರ್ಯವಾಗಿ ಕಂಡುಬಂದಿದೆ.

ಕಲ್ಲುಗಾರಿಕೆಯ ಆಗಿನ ಕಾಲದ ಕಲ್ಲುಕುಟಿಕರಿಗೆ ಹಾಗೂ ಶಿಲ್ಪಿಗಳಿಗೆ ವರದಾನವಾಗಿತ್ತು. ಇದರಿಂದಾಗಿ ಶಿಲ್ಪಿಗಳು ತಮ್ಮ ಕೌಶಲವನ್ನು ಪ್ರದರ್ಶಿಸುವುದಕ್ಕೆ ಅವಕಾಶ ಮಾಡಿಕೊಟ್ಟಿತ್ತು. ವಿವಿಧ ಕಲ್ಲುಗಳನ್ನು ಕತ್ತರಿಸಿ ನಿರ್ದಿಷ್ಟ ಆಕಾರವನ್ನು ನೀಡಿ ಶಿಲ್ಪಗಳು, ಕಂಬಗಳಿಗೆ, ಕೋಟೆಗಳನ್ನು ಕಟ್ಟಲು, ಶವದ ಗೋರಿಗಳನ್ನು ಕಟ್ಟಲು ಇಟ್ಟಿಗೆಗಳನ್ನು ಅಷ್ಟೇ ಅಲ್ಲದೆ ವಿವಿಧ ಬಗೆಯ ಕಲ್ಲುಗಳನ್ನು ಬಳಸಿಕೊಳ್ಳುತ್ತಿದ್ದರು. ಉದಾಹರಣೆಯಾಗಿ, ಹೈದರ್ ಮತ್ತು ಟಿಪ್ಪು ಹಾಗೂ ಟಿಪ್ಪುವಿನ ಸಮಾಧಿ ಇರುವ ಗುಂಬಜ್‌ನ ಹೊರಭಾಗದಲ್ಲಿರುವ ಕಂಬಗಳು ಹಾಗೂ ಗುಂಬಜ್ ಪ್ರದೇಶದಲ್ಲಿರುವ ಶವದ ಗೋರಿಗಳು ಇದಕ್ಕೆ ಸಾಕ್ಷಿಯಾಗಿವೆ.

ಕೈಗಾರಿಕೆಯಲ್ಲಿ ತೊಡಗಿದ್ದ ಜನರು ಬೇರೆ ಬೇರೆ ವರ್ಗದ ಸಮಾಜದಿಂದ ಗುರುತಿಸಲ್ಪಟ್ಟಿದ್ದು ಒಂದು ವಿಶಿಷ್ಟ ಅಂಶವಾಗಿದೆ. ಅಂದರೆ ಕಸುಬು ಮತ್ತು ವರ್ಗದ

ನಡುವಿನ ಸಂಬಂಧ ಇಂದಿಗಿಂತ ಅಂದು ಕ್ಲಿಷ್ಟಕರವಾಗಿದ್ದಿತು. ಆದುದರಿಂದ ಕೈಗಾರಿಕಾ ತಯಾರಿಕಾ ವಸ್ತುಗಳ ತಯಾರಿಕೆ, ಕುಶಲಕಲೆಗಳು ವಂಶಪಾರಂಪರ್ಯವಾಗಿ ಜಾತಿಗಳ ಚೌಕಟ್ಟಿನೊಳಗೆ ಕೂಡಿಕೊಂಡು ಬೆಳೆದುಬಂದಿವೆ.

ಹೈದರಾಲಿ ತನ್ನ ನಾಣ್ಯ ವ್ಯವಸ್ಥೆಯಲ್ಲಿ ಕೆಲವೇ ಕೆಲವು ಸ್ಥಳಗಳಲ್ಲಿ ಟಂಕಸಾಲೆಗಳನ್ನು ಸ್ಥಾಪಿಸಿದ್ದನು. ಅವುಗಳೆಂದರೆ ನಗರ, ಗುತ್ತಿಪಟ್ಟಣ, ಶ್ರೀರಂಗಪಟ್ಟಣ, ಕ್ಯಾಲಿಕಟ್. ಇಲ್ಲಿ ವಿವಿಧ ಲೋಹದ ನಾಣ್ಯಗಳಾದ ಚಿನ್ನ ಮತ್ತು ತಾಮ್ರದ ನಾಣ್ಯಗಳನ್ನು ಟಂಕಿಸಲಾಗುತ್ತಿತ್ತು. ತನ್ನ ನಾಣ್ಯಗಳಾದ ಚಿನ್ನದ ಲೋಹದ ನಾಣ್ಯಗಳಿಗೆ ಪಗೋಡ, ಅರ್ಧಪಗೋಡ, ಪಣಮ್ ಎಂಬ ಹೆಸರನ್ನು ನೀಡಿದ್ದನು. ಇವನ ಚಿನ್ನದ ನಾಣ್ಯಗಳಲ್ಲಿ ಬಹುತೇಕವಾಗಿ ಹಿಂದೂ ದೇವರುಗಳಾದ ಶಿವ, ಪಾರ್ವತಿ, ವಿಷ್ಣುವಿನ ಚಿತ್ರಗಳು ಹಾಗೂ ಶಿವನ ಆಯುಧವಾದ ತ್ರಿಶೂಲ, ವಿಷ್ಣುವಿನ ಚಕ್ರಗಳನ್ನು ಮುದ್ರಿಸಿರುವುದು ಕಂಡುಬಂದಿದೆ.[5] ಇದರಿಂದಾಗಿ ಹೈದರ್ ಹಿಂದೂ ಜನರ ಪ್ರೀತಿ ವಿಶ್ವಾಸವನ್ನು ಗಳಿಸಲು ಸಹಕಾರಿಯಾಗಿತ್ತು. ಒಬ್ಬ ಇಸ್ಲಾಂ ಧರ್ಮದ ಅನುಯಾಯಿಯಾಗಿ ಹಿಂದೂ ದೇವರುಗಳ ಚಿತ್ರಗಳನ್ನು ಚಿನ್ನದ ನಾಣ್ಯಗಳಲ್ಲಿ ಮುದ್ರಿಸಿರುವುದನ್ನು ಗಮನಿಸಿದರೆ ಅವನ ಉತ್ತಮ ವ್ಯಕ್ತಿತ್ವದ ಗುಣಕ್ಕೆ ಸಾಕ್ಷಿಯಾಗಿದೆ. ಹೈದರಾಲಿ ಅನುಸರಿಸಿದ ನಾಣ್ಯವ್ಯವಸ್ಥೆಯ ಮುದ್ರೆಯು ಹಿಂದೂಗಳಿಗೆ ಗೌರವ ಕೊಡುತ್ತಿದ್ದನು ಎಂಬುದನ್ನು ಸೂಚಿಸುತ್ತದೆ. ಚಿನ್ನದ ನಾಣ್ಯಗಳಲ್ಲಿ ಜಿಂಕೆಯ ಚಿತ್ರವನ್ನು ಸಹ ಮುದ್ರಿಸಿರುವುದು ಪ್ರಾಣಿಗಳ ಬಗ್ಗೆ ಇದ್ದ ಕಾಳಜಿ ಅಥವಾ ಪ್ರೀತಿಯನ್ನು ತೋರಿಸುತ್ತದೆ. ಚಿನ್ನದ ನಾಣ್ಯಗಳಲ್ಲಿ ತನ್ನ ಹೆಸರಿನ ಮೊದಲ ಅಕ್ಷರ 'ಹೈ' ಎಂಬ ಪರ್ಷಿಯನ್ ಅಕ್ಷರವನ್ನು ಹಾಗೂ ದಿನಾಂಕವನ್ನು ನಾಣ್ಯಗಳಲ್ಲಿ ಮುದ್ರಿಸಿದ್ದನು. ಉದಾಹರಣೆಗೆ 2.7 ಗ್ರೇನ್ಸ್ ತೂಕವಿದ್ದ ಪಣಮ್ ನಾಣ್ಯದ ಹಿಂಭಾಗದಲ್ಲಿ 1189 ಎಂಬ ದಿನಾಂಕವನ್ನು ಮುದ್ರಿಸಲಾಗಿದೆ. ಚಿನ್ನದ ನಾಣ್ಯಗಳಲ್ಲಿ ನಿರ್ದಿಷ್ಟ ತೂಕ ಇರಲಿಲ್ಲ. ಪಗೋಡ ಮೌಲ್ಯದ 51.5 ಗ್ರೇನ್ ಒಂದು ಚಿನ್ನದ ನಾಣ್ಯ ಇನ್ನೊಂದು 41 ಗ್ರೇನ್ ಇರುವ ಚಿನ್ನದ ನಾಣ್ಯಗಳು ಕಂಡುಬಂದಿದೆ. ಅದೇ ರೀತಿ ಅರ್ಧಪಗೋಡ, ಪಣಮ್‌ನಾಣ್ಯಗಳಲ್ಲಿಯೂ ಸಹ ತೂಕ ವ್ಯತ್ಯಾಸಗಳು ಕಂಡುಬಂದಿರುತ್ತದೆ. ಪಗೋಡ, ಅರ್ಧಪಗೋಡ, ಪಣಮ್ ನಾಣ್ಯಗಳಲ್ಲಿ ವಿಷ್ಣು ದೇವರಿಗಿಂತ ಶಿವ, ಪಾವರ್ತಿಯರ ಚಿತ್ರವನ್ನು ನಾಣ್ಯಗಳಲ್ಲಿ ಹೆಚ್ಚಾಗಿ ಮುದ್ರಿಸಲಾಗಿದೆ. ಹೈದರಾಲಿಯು ಚಿನ್ನದ ನಾಣ್ಯಗಳಲ್ಲಿ ವಿಜಯನಗರದ ಅರಸರು ಹಾಗೂ ಕೆಳದಿಯ ನಾಯಕರ ನಾಣ್ಯಗಳಲ್ಲಿದ್ದ ಗುಣಲಕ್ಷಣಗಳನ್ನು ಮುದ್ರಿಸಿರುವುದರಿಂದ ಆ ಕಾಲದ ನಾಣ್ಯಗಳನ್ನು ಅನುಸರಿಸಿದ್ದನು ಎಂದು ತಿಳಿದು ಬಂದಿರುತ್ತದೆ.[6]

ಹೈದರಾಲಿಯೂ ಚಿನ್ನದ ನಾಣ್ಯಗಳನ್ನು ಬಿಟ್ಟರೆ ತಾಮ್ರದ ನಾಣ್ಯಗಳನ್ನು ಟಂಕಿಸಿದನು. ತಾಮ್ರದ ನಾಣ್ಯಗಳಿಗೆ ಪೈಸ, ಅರ್ಧಪೈಸ, ಕಾಲು ಪೈಸ, 1/8 ಪೈಸ ಎಂಬ ಹೆಸರುಗಳನ್ನು ಇರಿಸಿದ್ದನು. ಇವನ ತಾಮ್ರದ ನಾಣ್ಯಗಲ್ಲಿ ಆನೆ, ಹುಲಿ

ಚಿತ್ರಗಳು, ಮುಂಭಾಗದಲ್ಲಿ ಕಂಡುಬಂದಿವೆ. ಪೈಸ ನಾಣ್ಯ 191.5 ಗ್ರೇನ್ ಇದ್ದು ಮುಂಭಾಗದಲ್ಲಿ ನಿಂತಿರುವ ಆನೆ ಚಿತ್ರವನ್ನು ಮತ್ತು ಹಿಂಭಾಗದಲ್ಲಿ ದಿನಾಂಕವನ್ನು ಮುದ್ರಿಸಲಾಗಿದೆ. ಪೈಸ ನಾಣ್ಯಗಳಲ್ಲಿ ಮಾತ್ರ ಆನೆ ಚಿತ್ರವಿರುತ್ತಿತ್ತು. ಅರ್ಧ ಪೈಸ, ಕಾಲು ಪೈಸ, 1/8 ಪೈಸದ ನಾಣ್ಯಗಳಲ್ಲಿ ಹುಲಿಯ ಚಿತ್ರವು ಮುಂಭಾಗದಲ್ಲಿ ಕಂಡುಬಂದಿದ್ದು, ಆಯುಧ ಚಿತ್ರವನ್ನು ಹಿಂಭಾಗದಲ್ಲಿ ಮುದ್ರಿಸಲಾಗಿದೆ. ಅದರ ಜೊತೆಗೆ ಆಯುಧದ ಸುತ್ತ ಎರಡು ವೃತ್ತಾಕಾರದ ಗೆರೆಗಳನ್ನು ಎಳೆದು ಅದರ ಒಳಗೆ ಚುಕ್ಕಿಗಳನ್ನು ಮುದ್ರಿಸಲಾಗಿದೆ. ಆಯುಧ ಮುಖವನ್ನು ಬಲಭಾಗಕ್ಕೆ ಮುದ್ರಿಸಲಾಗಿದೆ.

ಟಿಪ್ಪು ಸುಲ್ತಾನ್ ನಾಣ್ಯ ವ್ಯವಸ್ಥೆಯಲ್ಲಿ ಸಾಕಷ್ಟು ಬದಲಾವಣೆ ತಂದಿದ್ದನು. ಹೈದರಾಲಿಗಿಂತ ಟಿಪ್ಪುಸುಲ್ತಾನ್ ರಾಜ್ಯವು ವಿಸ್ತಾರಗೊಂಡಿದ್ದರಿಂದ ಹಾಗೂ ನಾಣ್ಯವ್ಯವಸ್ಥೆ, ಆರ್ಥಿಕ ಪ್ರಗತಿಯನ್ನು ಸಾಧಿಸುವುದಕ್ಕೋಸ್ಕರ ಟಂಕಸಾಲೆಗಳನ್ನು ಶ್ರೀರಂಗಪಟ್ಟಣ, ನಜರ್‌ಬಾದ್ (ಮೈಸೂರು), ಬಿದನೂರು ಅಥವಾ ನಗರ, ಬೆಂಗಳೂರು, ಧಾರವಾಡ, ಚಿತ್ರದುರ್ಗ, ಆಂಧ್ರಪ್ರದೇಶದ ಗುತ್ತಿ, ಗುರ್ರಂಕೊಂಡ, ದಿಂಡಿಗಲ್, ತಮಿಳುನಾಡಿನ ಸಲಾಮಾಬಾದ್, ಕಲ್ಲಿಕೋಟೆಯ ಫಿರೋರ್, ಕಲ್ಲಿಕೋಟೆ, ಹೊಳೆಹೊನ್ನೂರು, ಸಕ್ಕರೆಪಟ್ಟಣ, ಸತಾರ, ಅಬ್ಬೂರಿನಲ್ಲಿ ಟಂಕಶಾಲೆ, ಆಂಧ್ರಪ್ರದೇಶದ ಗಂಜಿಕೋಟೆಗಳಲ್ಲಿ ಸ್ಥಾಪಿಸಿದ್ದನು.[7] ಈ ಎಲ್ಲಾ ಟಂಕಸಾಲೆಗಳಲ್ಲಿ ಏಕರೀತಿಯ ನಾಣ್ಯಗಳನ್ನು ಟಂಕಿಸುತ್ತಿರಲಿಲ್ಲ. ವಿವಿಧ ನಾಣ್ಯಗಳನ್ನು ವಿವಿಧ ಪ್ರದೇಶಗಳಲ್ಲಿ ಟಂಕಿಸಲಾಗುತ್ತಿತ್ತು. ಕೆಲವು ಟಂಕಸಾಲೆಗಳಲ್ಲಿ ಯಾವ ವರ್ಷದಿಂದ ಯಾವ ವರ್ಷದವರೆಗೆ ನಾಣ್ಯಗಳನ್ನು ಮುದ್ರಿಸಲಾಗುತ್ತಿತ್ತು ಎಂದು ತಿಳಿದುಬಂದಿರುತ್ತದೆ. ಉದಾಹರಣೆಗೆ: ನಜರ್‌ಬಾದ್‌ನಲ್ಲಿ ಕ್ರಿ.ಶ. 1787ರಲ್ಲಿ ಟಂಕಸಾಲೆ ಪ್ರಾರಂಭಿಸಿದ್ದನು. ಬೆಂಗಳೂರು ಪ್ರದೇಶದಲ್ಲಿ ಕ್ರಿ.ಶ.1791ರಲ್ಲಿ ಟಂಕಿಸುವುದನ್ನು ನಿಲ್ಲಿಸಲಾಯಿತು. ಚಿತ್ರದುರ್ಗದಲ್ಲಿ ಕ್ರಿ.ಶ. 1787 ರಿಂದ ಕ್ರಿ.ಶ. 1791ರ ವರೆಗೆ, ದಿಂಡಿಗಲ್‌ನಲ್ಲಿ ಕ್ರಿ.ಶ. 1787 ರಿಂದ ಕ್ರಿ.ಶ. 1790ರ ವರೆಗೆ, ಕಲ್ಲಿಕೋಟೆಯ ಫಿರೋಕ್‌ನಲ್ಲಿ ಕ್ರಿ.ಶ. 1788 ರಿಂದ ಕ್ರಿ.ಶ. 1790ರ ವರೆಗೆ ಮುದ್ರಿಸಲಾಗುತ್ತಿತ್ತು. ಈ ಅಂಶದಿಂದ ತಿಳಿಯಬಹುದಾದ ವಿಷಯವೆಂದರೆ, ತನ್ನ ಅಂತಿಮ ಕಾಲದಲ್ಲಿ ಸಮಸ್ಯೆಗಳು ಪ್ರಾರಂಭವಾಗಿದ್ದವು ಹಾಗಾಗಿ ಯುದ್ಧದಿಂದ ಕಳೆದುಕೊಂಡ ಪ್ರದೇಶಗಳಲ್ಲಿ ಟಂಕಸಾಲೆಯಲ್ಲಿ ನಾಣ್ಯಮುದ್ರಣ ಸ್ಥಗಿತಗೊಂಡಿತು. ಟಿಪ್ಪು ತನ್ನ ನಾಣ್ಯಗಳಲ್ಲಿ ಕಾಲಮಾನ ಪದ್ಧತಿಯನ್ನು ಅಳವಡಿಸಿಕೊಂಡು ಅವುಗಳಿಗೆ ಕಾಲಮಾನದ ವರ್ಷಗಳಾದ 37, 38, 39, 40, 41, 42, 43, 44, 45, 46, 47, 48, 49, 50, 51, 52, 53 ಎಂದು ಕೊಟ್ಟಿದ್ದು ಕಾಲಮಾನದ ಹೆಸರನ್ನು ನೀಡಿದ್ದನು. ಕಾಲಮಾನದ ಹೆಸರುಗಳೆಂದರೆ ಕ್ರಮವಾಗಿ ಜಕಿ, ಅಜಲ್, ಜಲನ್, ದಲ್ವ್, ಷಾ, ಸಾರಾ, ಸರಾಬ್, ಶಿತಾ, ಜಬರ್‌ಜದ್, ಸಹರ್, ಸಾಹರ್, ರಾಸಿಖ್, ಷಾದ್, ಹಿರಾಸಕ್, ಸಾಜ್ ಮತ್ತು ಷಾಬಾದ್ ಬಾರಿಷ್.

ಟಿಪ್ಪು ಚಿನ್ನದ ನಾಣ್ಯಗಳಿಗೆ ಪ್ರವಾದಿಗಳ ಹೆಸರನ್ನು ನೀಡಿ ಗೌರವಿಸಿದನು. ಚಿನ್ನದ ನಾಣ್ಯಗಳೆಂದರೆ, ಅಹ್ಮದಿ, ಸದಿಕಿ, ಫಾರೂಕಿ, ಫನಮ್ ನಾಣ್ಯಗಳನ್ನು ಮುದ್ರಿಸಿದನು. 13.6 ಗ್ರೇನ್ಸ್ ಅಹ್ಮದಿ ನಾಣ್ಯದ ಮುಂಭಾಗದಲ್ಲಿ ಮತ್ತು ಹಿಂಭಾಗದಲ್ಲಿ ಪರ್ಶಿಯನ್ ಪದಗಳಿರುವುಅನ್ನು ನೋಡಬಹುದಾಗಿದೆ. ಅಹ್ಮದೀಯಲ್ಲಿ ಇದ್ದಂತಹ ಪರ್ಶಿಯನ್ ಪದಗಳು ಸಿದ್ದಿಕಿ ನಾಣ್ಯದಲ್ಲಿ ಕಂಡುಬಂದಿವೆ. ಆದರೆ ಅಹ್ಮದೀ ಮತ್ತು ಸಿದ್ದಿಕಿಗಳ ನಾಣ್ಯಗಳ ತೂಕ ಬೇರೆ ಬೇರೆಯಾಗಿದೆ. ಎಲ್ಲಾ ಚಿನ್ನದ ನಾಣ್ಯಕ್ಕಿಂತ ಫಾರೂಕೀ ಅಥವಾ ಪಗೋಡ ನಾಣ್ಯ ಭಿನ್ನವಾದ ಲಕ್ಷಣವನ್ನು ಹೊಂದಿದೆ. ಅದೇನೆಂದರೆ, ನಾಣ್ಯದ ಮುಂಭಾಗದಲ್ಲಿ 3 ರೀತಿಯ ಲಕ್ಷಣಗಳು ಇರುವುದು ಕಂಡುಬಂದಿದೆ. 'ಹೈ' ಎಂಬ ಅಕ್ಷರ, ಕೆಲವು ನಾಣ್ಯಗಳ ಮುಂಭಾಗದಲ್ಲಿ ಮಹಮ್ಮದ್ ಎಂಬ ಪರ್ಷಿಯನ್ ಪದ, ಇನ್ನೂ ಕೆಲವು ನಾಣ್ಯಗಳ ಮುಂಭಾಗದಲ್ಲಿ ಫರೋಕಿ ಎಂದು ಮುದ್ರಿಸಲಾಗಿದೆ. ಟಿಪ್ಪುವಿನ ಚಿನ್ನದ ನಾಣ್ಯಗಳಲ್ಲೆ ಪಣಮ್ ನಾಣ್ಯ ಅತ್ಯಂತ ಚಿಕ್ಕದಾದ ಲಕ್ಷಣವನ್ನು ಹೊಂದಿದೆ. ಮುಂಭಾಗದಲ್ಲಿ 'ಹೈ' ಎಂಬ ಅಕ್ಷರವಿದ್ದು ಹಿಂಭಾಗದಲ್ಲಿ ದಿನಾಂಕವನ್ನು ಮುದ್ರಿಸಲಾಗಿದೆ. ಟಿಪ್ಪುವಿನ ಚಿನ್ನದ ಎಲ್ಲಾ ನಾಣ್ಯಗಳು ನಿರ್ದಿಷ್ಟ ಅಳತೆ ಅಥವಾ ನಿರ್ದಿಷ್ಟ ತೂಕ ಹೊಂದಿಲ್ಲ.

ಟಿಪ್ಪು 7 ರೀತಿಯ ಹೆಸರಿನ ಬೆಳ್ಳಿನಾಣ್ಯಗಳನ್ನು ಟಂಕಿಸಿದ್ದನು. ಅವುಗಳೆಂದರೆ, ಹೈದರೀ, ಇಮಾಮೀ, ಅಬಿದೀ, ಬಾಕಿರಿ, ಜಫಾರಿ, ಕಾಜಮೀ ಮತ್ತು ಖಿಜಿ. ಈ ಎಲ್ಲಾ ಹೆಸರುಗಳನ್ನು ಇಸ್ಲಾಂ ಧರ್ಮದಲ್ಲಿ ಕಂಡುಬರುವ್ ಉನ್ನತ ವ್ಯಕ್ತಿಗಳ ಗೌರವಾರ್ಥವಾಗಿ ಅವರುಗಳ ಹೆಸರುಗಳನ್ನು ಬೆಳ್ಳಿ ನಾಣ್ಯಕ್ಕೆ ಇಟ್ಟಿದ್ದನು. ಬೆಳ್ಳಿ ನಾಣ್ಯಗಳು ರೂಪಾಯಿ ನಾಣ್ಯಗಳಾಗಿದ್ದವು. ಹೈದರೀ ನಾಣ್ಯದಲ್ಲಿನ ಲಕ್ಷಣವೆಂದರೆ, ಮುಂಭಾಗದಲ್ಲಿ ಟಂಕಸಾಲೆಯ ಹೆಸರು, ಹಿಜಿರ ವರ್ಷವನ್ನು ಮುದ್ರಿಸಿದ್ದು ಹಿಂಭಾಗದಲ್ಲಿ ಚುಕ್ಕಿ ವೃತ್ತಾಕಾರದ ಗೆರೆಗಳು ಕಂಡುಬಂದಿರುತ್ತವೆ.

ಟಿಪ್ಪುವಿನ ಬೆಳ್ಳಿನಾಣ್ಯಗಳು ಸಮತೂಕವನ್ನು ಹೊಂದಿರುವುದಿಲ್ಲ. ಬೆಳ್ಳಿನಾಣ್ಯಗಳ ಮುಂಭಾಗದಲ್ಲಿ ಹೆಚ್ಚಾಗಿ ಪರ್ಷಿಯನ್ ಪದಗಳನ್ನು ಮುದ್ರಿಸಲಾಗಿದ್ದು ಹಿಂಭಾಗದಲ್ಲಿಯೂ ಸಹ ಪರ್ಷಿಯನ್ ಪದಗಳನ್ನು ಮುದ್ರಿಸಲಾಗಿದೆ. ಮುಂಭಾಗದಲ್ಲಿ ಆ ವ್ಯಕ್ತಿಗಳ ಗೌರವಾರ್ಥವಾಗಿ ಅವರ ವರ್ಷವನ್ನು ಮುದ್ರಿಸಿದರೆ, ಹಿಂಭಾಗದಲ್ಲಿ ಚುಕ್ಕೆಗಳು ಹಾಗೂ ವೃತ್ತಾಕಾರದ ಗೆರೆಗಳನ್ನು ಮುದ್ರಿಸಲಾಗುತ್ತಿತ್ತು.

ತಾಮ್ರನಾಣ್ಯಗಳನ್ನು ಟಿಪ್ಪು ಐದು ರೀತಿಯ ಹೆಸರಿನಲ್ಲಿ ಮುದ್ರಿಸಿದನು. ಇವುಗಳಿಗೆ ವಿಜ್ಞಾನದಲ್ಲಿ ಆಸಕ್ತಿ ಇದ್ದ ಟಿಪ್ಪು ಗ್ರಹಗಳ ಅರ್ಥವನ್ನು ಕೊಡುವ ಪರ್ಷಿಯನ್ ಹೆಸರುಗಳನ್ನು ಇರಿಸಿದ್ದನು. ಅವುಗಳೆಂದರೆ, ಓಥಮನಿ ಅಥವಾ ಮಸ್ತುರಿ, ಜೋಹ್ರಾ, ಬಹ್ರಾಂ, ಅಖ್ತರ್, ಕುತುಬ್ ಇವುಗಳು ಪೈಸ ನಾಣ್ಯಗಳಾಗಿದ್ದವು. ಓಥಮನಿ ನಾಣ್ಯದ ಮುಂಭಾಗದಲ್ಲಿ ಸಾಮಾನ್ಯವಾಗಿ ಆನೆಯ ಚಿತ್ರವು ಕಂಡುಬಂದರೆ, ಹಿಂಭಾಗದಲ್ಲಿ ಮೂರು ಪ್ರಕಾರದ ಲಕ್ಷಣಗಳು ಕಂಡುಬಂದಿರುತ್ತವೆ. ಅವುಗಳೆಂದರೆ

ಓಥಮನಿ/ದರ್ಬ್–ಇ ದರುಸ್/ಸುತ್ತನತ್ ಇ–ಪಟನ್ ಎಂದು ಮುದ್ರಿಸಿದ್ದರೆ ಮತ್ತೊಂದು ಓಥಮನಿ ನಾಣ್ಯದಲ್ಲಿ ಮುಷ್ಠರೀ/ಜರ್ಬ್ ಇ ದರುಸ್ ಸುಲ್ತನತ್/ ಇಪಟನ್/1222 ಮೌಲೂದಿ ಎಂದು ಮುದ್ರಿಸಲಾಗಿದೆ. ಹಾಗೆಯೇ ಮುಸ್ತುರಿ/ ದರ್ಬ್ ಇ ದರುಸ್/ ಸುತ್ತನತ್ ಎಂದು ಮುದ್ರಿಸಿದ್ದನು.

ಜೋಹ್ರ ನಾಣ್ಯದ ಮುಂಭಾಗದಲ್ಲಿ ಮೂರು ರೀತಿಯ ಲಕ್ಷಣಗಳು ಕಂಡಿಬಂದಿವೆ. ಸಾಮಾನ್ಯವಾಗಿ ಜೋಹ್ರ ನಾಣ್ಯದ ಮುಂಭಾಗದಲ್ಲಿ ಆನೆಯ ಚಿತ್ರ ಹಾಗೂ ದಿನಾಂಕ, ಪರ್ಷಿಯನ್ ಪದಗಳು ಕಂಡುಬಂದಿರುತ್ತವೆ. ಚಿತ್ರದುರ್ಗ ನಗರಕ್ಕೆ ಟಿಪ್ಪುಸುಲ್ತಾನ್ 'ಫರೂಕ್ ಮಿಸಾರ್' ಎಂಬ ಹೆಸರನ್ನು ಇರಿಸಿದ್ದನು ಎಂದು ಬಹ್ರಾಂ ನಾಣ್ಯವು ತಿಳಿಸುತ್ತದೆ. ಇದರಿಂದ ಟಿಪ್ಪು ತನ್ನ ಪ್ರದೇಶಗಳಿಗೆ ಉರ್ದು ಹೆಸರನ್ನು ನಾಮಕರಣ ಮಾಡುತ್ತಿದ್ದನೆಂದು ತಿಳಿದುಬರುತ್ತದೆ.

ಟಿಪ್ಪುಸುಲ್ತಾನ್ ತನ್ನ ತಂದೆಯಂತೆ ಯಾವ ನಾಣ್ಯಗಳಲ್ಲಿಯೂ ಸಹ ಹಿಂದೂ ದೇವರುಗಳನ್ನು ಮುದ್ರಿಸಿರಲಿಲ್ಲ.[8] ಆದರೆ ತನ್ನ ತಂದೆಯ ಹೆಸರಿನ ಪ್ರಾರಂಭದ 'ಹೈ' ಎಂಬ ಪರ್ಷಿಯನ್ ಅಕ್ಷರವನ್ನು ಮುದ್ರಿಸಿದ್ದು ಅವನ ವ್ಯಕ್ತಿತ್ವಕ್ಕೆ ಒಂದು ಕಪ್ಪು ಚುಕ್ಕೆ ಎಂದು ಹೇಳಬಹುದಾಗಿದೆ. ಟಿಪ್ಪುಸುಲ್ತಾನ್ ಇಸ್ಲಾಂ ಧರ್ಮದ ಗೌರವ ವ್ಯಕ್ತಿಗಳ ಜ್ಞಾಪಕಾರ್ಥವಾಗಿ ಅವರುಗಳ ಹೆಸರುಗಳನ್ನು ಇಟ್ಟಿದ್ದನು. ಟಿಪ್ಪುವಿನ ತಾಮ್ರ ನಾಣ್ಯಗಳಲ್ಲಿಯೂ ಸಹ ನಿಗಧಿಪಡಿಸಿದ ಸಮ ತೂಕದ ನಾಣ್ಯಗಳು ಕಂಡುಬರುವುದಿಲ್ಲ. ಪರ್ಷಿಯನ್ ಪದಗಳೇ ಇವನ ನಾಣ್ಯದ ತುಂಬೆಲ್ಲ ಹರಡಿಕೊಂಡಿದ್ದವು ಹಾಗೂ ವರ್ಷಗಳನ್ನು ನಮೂದಿಸಲಾಗಿತ್ತು.

ಆರ್ಥಿಕ ಜೀವನವು ಸುವ್ಯವಸ್ಥಿತವಾಗಿರಬೇಕಾದರೆ ಕೈಗಾರಿಕೆಗಳು, ನಾಣ್ಯವ್ಯವಸ್ಥೆ ಹೇಗೆ ಸಹಕಾರಿಯೋ ಹಾಗೆಯೇ ಕಂದಾಯ ಮತ್ತು ವ್ಯಾಪಾರ–ವಾಣಿಜ್ಯವು ಪ್ರಮುಖ ಪಾತ್ರ ವಹಿಸುತ್ತದೆ. ಟಿಪ್ಪು ಉತ್ತಮ ಕಂದಾಯ ಆಡಳಿತದ ವ್ಯವಸ್ಥೆಯನ್ನು ಹೊಂದಿದ್ದನು. ಪ್ರಸ್ತುತ ದಿನದ ಕಂದಾಯದ ವ್ಯವಸ್ಥೆಯಂತೆ ಟಿಪ್ಪು ತನ್ನ ಕಂದಾಯ ವ್ಯವಸ್ಥೆ 20 ರಿಂದ 30 ತುಕಡಿಗಳಾಗಿ ವಿಂಗಡಿಸಿದ್ದನು. ಅದಕ್ಕೆ 'ಅಸಫ್' ಎಂಬ ಒಂದು ಕಛೇರಿಯನ್ನು ಸ್ಥಾಪಿಸಿದ್ದನು. ಕಛೇರಿಗೆ ಒಬ್ಬ ಅಮಲದಾರ, ಒಬ್ಬ ಶಿರಸ್ತೆದಾರ, ಮೂರು ಜನ ಗುಮಾಸ್ತರು, ಒಬ್ಬ ತಫ್‌ದಾರ, ಒಬ್ಬ ಸರಾಫ್ ಎಂಬುವವರನ್ನು ನೇಮಿಸುವುದರ ಜೊತೆಗೆ 6 ಜನ ಸಹಾಯಕ ಸೇವಕರನ್ನು ನೇಮಿಸಿದ್ದು ಇದು ಒಂದು ಉತ್ತಮ ವ್ಯವಸ್ಥೆ ಎಂದು ಗುರ್ತಿಸಿಕೊಳ್ಳುತ್ತದೆ.[9]

ಟಿಪ್ಪುವಿನ ಕಾಲದಲ್ಲಿ ರೈತರಿಗೆ ಇದ್ದ ತೊಂದರೆಗಳನ್ನು ಹೋಗಲಾಡಿಸಲು ಕಂದಾಯ ವ್ಯವಸ್ಥೆಯಲ್ಲಿ ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ಕಂದಾಯವನ್ನು ನಿಗಧಿಪಡಿಸಿದ್ದನು. ಟಿಪ್ಪು ಕಂದಾಯವನ್ನು ಭೂಮಿಯ ಲಕ್ಷಣ, ಬೆಳೆಗಳ ಆಧಾರದ ಮೇಲೆ ನಿಗದಿಪಡಿಸಿದ್ದರು. ಅನುಕಂಪ, ಸಹಕಾರ, ಉದಾರತನವಾದ ಅಂಶಗಳ

ಆಧಾರದ ಮೇಲೆ ಕಂದಾಯ ರಚನೆಗೊಂಡಿತ್ತು. ಇವು ರೈತರಿಗೆ ಪೂರಕವೇ ಹೊರತು ಮಾರಕವಾಗಿರಲಿಲ್ಲ. ರೈತರನ್ನು ಪ್ರೋತ್ಸಾಹಿಸುವ ಉದ್ದೇಶದಿಂದ 'ತಕ್ಕಾವಿ' ಎಂಬ ಸಾಲದ ವ್ಯವಸ್ಥೆಯನ್ನು ಏರ್ಪಡಿಸಿದ್ದನು. ಸಾಲವನ್ನು ನಿಗದಿಪಡಿಸಿದ ವ್ಯವಸ್ಥೆಯಲ್ಲಿ ಮಾತ್ರ ವಸೂಲಿ ಮಾಡಲಾಗುತ್ತಿತ್ತು. ಟಿಪ್ಪು ಅವನ ಆಡಳಿತ ಪ್ರದೇಶದಲ್ಲಿ ಯಾವಾಗಲೂ ಕೃಷಿ ಚಟುವಟಿಕೆಗಳು ನಡೆಯುತ್ತಿರಬೇಕೆಂಬ ಆಲೋಚನೆಯನ್ನು ಹೊಂದಿದ್ದನು.

ಹೈದರ್ ಮತ್ತು ಟಿಪ್ಪು ಸುಲ್ತಾನ್ ಕಾಲದಲ್ಲಿ ದಕ್ಷಿಣ ಭಾರತದ ಬಂದರುಗಳಲ್ಲಿ ಫ್ರೆಂಚರು, ಬ್ರಿಟೀಷರು ತಮ್ಮ ವ್ಯಾಪಾರಗಳನ್ನು ಕೈಗೊಂಡಿದ್ದರಿಂದ ಸಂಪೂರ್ಣವಾಗಿ ಬಂದರುಗಳಲ್ಲಿ ಅಧಿಕಾರವನ್ನು ಚಲಾಯಿಸುವುದು ಸಾಧ್ಯವಾಗುತ್ತಿರಲಿಲ್ಲ. ಆದರೂ ಸಹ ವಿದೇಶಿ ರಾಜ್ಯ ಹಾಗೂ ರಾಷ್ಟ್ರಗಳೊಂದಿಗೆ ಉತ್ತಮ ಬಾಂಧವ್ಯ ಬೆಳೆಸಿ ಆಮದು ಮತ್ತು ರಫ್ತುಗೆ ಅನುಕೂಲವನ್ನು ಮಾಡಿಕೊಂಡಿದ್ದರು.

ಮೈಸೂರು ಸಂಸ್ಥಾನದಲ್ಲಿ ಕೃಷಿ ಮತ್ತು ಕೈಗಾರಿಕೆಯಿಂದ ತಯಾರಾದ ವಸ್ತುಗಳು ಅಧಿಕ ಪ್ರಮಾಣದಲ್ಲಿ ವೃದ್ಧಿಗೊಳ್ಳುತ್ತಿದ್ದವು. ಅವುಗಳೆಂದರೆ, ರೇಷ್ಮೆ, ಏಲಕ್ಕಿ, ಅಡಕೆ, ಖರ್ಜೂರ, ಶ್ರೀಗಂಧ, ಎಣ್ಣೆ, ತುಪ್ಪ, ಇಂಗು, ಸಕ್ಕರೆ, ಕಲ್ಲುಸಕ್ಕರೆ, ಕಬ್ಬಿನಬೆಲ್ಲ, ತಾಮ್ರದ ವಸ್ತುಗಳು, ಸೀಗೆಕಾಯಿ, ಬಣ್ಣಗಳು, ಅಕ್ಕಿಗೋಧಿ, ಅರಳು, ಮಡಿಕೆಗಳು, ಉಪ್ಪು, ರಾಗಿ, ಹುಣಸೇಹಣ್ಣು, ಬಿದಿರಿನ ವಸ್ತುಗಳು, ಚರ್ಮದ ವಸ್ತುಗಳು, ಮೆಣಸು ಮುಂತಾದವುಗಳನ್ನು ವ್ಯಾಪಾರದಲ್ಲಿ ಮಾರುವುದು ಕೊಳ್ಳುವುದು ನಡೆಯುತ್ತಿತ್ತು. ಸಂತೆಗಳು ರೈತರಿಗೆ ಒಂದು ದೃಷ್ಟಿಯಿಂದ ಅನುಕೂಲವಾಗಿದ್ದು ಮತ್ತೊಂದು ದೃಷ್ಟಿಯಿಂದ ಅನಾನುಕೂಲವಾಗಿತ್ತು. 'ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ' ಎನ್ನುವ ಗಾದೆಮಾತಿನಂತೆ ರೈತರಿಗೆ ತಮ್ಮ ಸರಕುಗಳ ವ್ಯಾಪಾರದಿಂದ ಹೆಚ್ಚು ಲಾಭ ಬರುತ್ತಿರಲಿಲ್ಲ. ಏಕೆಂದರೆ ಪ್ರಸ್ತುತ ದಿನಗಳಲ್ಲಿ ಪ್ರಮುಖ ರಸ್ತೆಗಳಲ್ಲಿ ಸಂಚರಿಸುವಾಗ ಸುಂಕವನ್ನು ಕೊಡುವ ಹಾಗೆ ಆಗಿನ ಕಾಲದಲ್ಲಿಯೂ ಸಹ ರಸ್ತೆಗಳಲ್ಲಿ ಸುಂಕ ವಸೂಲಿ ಮಾಡುತ್ತಿದ್ದರು. ಒಂದು ಹಳ್ಳಿ ಮತ್ತೊಂದು ಹಳ್ಳಿಗೆ ಬಂದಾಗ ಸುಂಕದಲ್ಲಿ ವ್ಯತ್ಯಾಸಗಳು ಕಂಡುಬರುತ್ತಿದ್ದವು. ಅಷ್ಟೇ ಅಲ್ಲದೆ ರೈತರು ತಮ್ಮ ಸರಕುಗಳನ್ನು ಮಾರುವಾಗ ಅಲ್ಲಿಯೂ ಸಹ ಸುಂಕವನ್ನು ಸರಕಾರಕ್ಕೆ ಕೊಡಬೇಕಾಗಿತ್ತು.

ಹೈದರ್ ಮತ್ತು ಟಿಪ್ಪುಸುಲ್ತಾನ್‌ರವರ ವಿದೇಶಿ ವ್ಯಾಪಾರ-ವಾಣಿಜ್ಯ ಸಂಬಂಧಗಳನ್ನು ನೋಡಿದಾಗ ಚೈನಾ, ಫ್ರಾನ್ಸ್, ಟರ್ಕಿ, ಆಫ್ಘಾನಿಸ್ತಾನ ಮೊದಲಾದ ರಾಷ್ಟ್ರಗಳೊಂದಿಗೆ ಉತ್ತಮ ವ್ಯಾಪಾರ ವಾಣಿಜ್ಯ ಸಂಬಂಧ ಹೊಂದಿದ್ದನು. ಅಷ್ಟೇ ಅಲ್ಲದೆ ಹೊರ ರಾಜ್ಯಗಳಾದ ಬಂಗಾಳ, ಕೇರಳ, ತಮಿಳುನಾಡು, ಗುಜರಾತ್ ಮುಂತಾದ ಪ್ರದೇಶಗಳೊಂದಿಗೆ ವ್ಯಾಪಾರ-ವಾಣಿಜ್ಯ ಸಂಪರ್ಕ ಹೊಂದಿದ್ದು ಇದರಿಂದ ಇವರ ಕಾಲದಲ್ಲಿ ಆರ್ಥಿಕ ಪ್ರಗತಿ ಮುಂದುವರಿಯುತ್ತಿತ್ತು. ಮೈಸೂರು ಸಂಸ್ಥಾನಕ್ಕೆ ಸೇರಿದ ಪ್ರದೇಶದಲ್ಲಿ ವಾಣಿಜ್ಯ ಬೆಳೆಗಳು ಅಧಿಕ ಪ್ರಮಾಣದಲ್ಲಿ ಬೆಳೆಯಲು ಭೂಮಿ

ಉತ್ತಮವಾಗಿದ್ದರಿಂದ ಹೈದರ್ ಮತ್ತು ಟಿಪ್ಪು ಆರ್ಥಿಕವಾಗಿ ಹೆಚ್ಚು ತೊಂದರೆಯನ್ನು ಅನುಭವಿಸಿರಲಿಲ್ಲ.

ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿನ ಕೈಗಾರಿಕಾಭಿವೃದ್ಧಿ ಎಂಬ ಈ ಸಂಶೋಧನೆಯಲ್ಲಿ ಇವರ ಕಾಲದ ಕೈಗಾರಿಕೆಗಳು, ನಾಣ್ಯವ್ಯವಸ್ಥೆ, ಆರ್ಥಿಕ ಜೀವನವನ್ನು ಪರಿಚಯಿಸಿ ಚರಿತ್ರೆಯ ಮಹತ್ವ ಹಾಗೂ ಹೈದರಾಲಿ ಮತ್ತು ಟಿಪ್ಪುಸುಲ್ತಾನ್‌ರವರ ಕೈಗಾರಿಕಾಭಿವೃದ್ಧಿಗೆ ಅವರ ಕೊಡುಗೆ ಏನು ಎಂಬುದನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ಇವರ ಕಾಲದಲ್ಲಿ ಕೈಗಾರಿಕೆಯಲ್ಲಿ ಬಳಸುತ್ತಿದ್ದ ಉಪಕರಣಗಳು ಹಾಗೂ ವೃತ್ತಿಗಳು ಅಳಿವಿನಂಚಿಗೆ ಸಿಲುಕಿವೆ. ಸ್ಥಳೀಯ ಜನರು ಹಾಗೂ ಸರ್ಕಾರ ಅವರ ಚರಿತ್ರೆಯ ಮೇಲೆ ಗಮನವನ್ನು ನೀಡಿ ಹೈದರಾಲಿ ಮತ್ತು ಟಿಪ್ಪುಸ್ತುಲಾನರ ಚರಿತ್ರೆಯನ್ನು ತಿಳಿಯಲು ಇರುವ ಆಗಿನ ಕಾಲದ ವಿವಿಧ ಉಪಕರಣಗಳು, ಕೋಟೆಗಳು, ಅರಮನೆಗಳು, ನಾಣ್ಯಗಳು ಮುಂತಾದವುಗಳನ್ನು ಉಳಿಸುವ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕಾಗಿದೆ. ಮುಂದಿನ ದಿನಗಳಲ್ಲಿ ಮತ್ತಷ್ಟು ಸಂಶೋಧನೆಗಳು ಹೈದರಾಲಿ ಮತ್ತು ಟಿಪ್ಪುಸುಲ್ತಾನ್‌ರವರ ಕೈಗಾರಿಕಾಭಿವೃದ್ಧಿಗೆ ಸಂಬಂಧಿಸಿದಂತೆ ನಡೆಯುತ್ತವೆ ಎಂಬುದು ನಮ್ಮ ಆಶಯವಾಗಿದೆ.

**ಕೊನೆ ಟಿಪ್ಪಣಿಗಳು :**

---

[1] ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕನ್‌ಟ್ರಿ ಆಫ್ ಮೈಸೂರು ಅಂಡ್ ಮಲಬಾರ್', ಸಂ.–1, 1870, ಪು.153–154.

[2] ಬುಕಾನನ್, 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕನ್‌ಟ್ರಿ ಆಫ್ ಮೈಸೂರು ಅಂಡ್ ಮಲಬಾರ್', ಸಂ.–1, 1807, ಪು.70.

[3] ಗಂಗಾನಾಯಕ್, ಕೆ.ಎಸ್. (ಪ್ರ.ಸಂ.), 'ಕರ್ನಾಟಕ ಚರಿತ್ರೆ', 2011, ಪು.200.

[4] ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು', 1995, ಪು.23.

[5] ಹೆಂಡರ್‌ಸನ್, ಜೆ.ಆರ್., 'ದ ಕಾಯಿನ್ಸ್ ಆಫ್ ಹೈದರಾಲಿ ಮತ್ತು ಟಿಪ್ಪುಸುಲ್ತಾನ್', 1987, ಪು.4.

[6] ನರಸಿಂಹಮೂರ್ತಿ, ಎ.ವಿ., 'ಕರ್ನಾಟಕ ನಾಣ್ಯ ಪರಂಪರೆ', 2003, ಪು.272–273.

[7] ಖಂಡೋಬರಾವ್, ಹೆಚ್., ನಾಣ್ಯ ಕರ್ನಾಟಕ ವಸ್ತುವಿನಿಮಯದಿಂದ ಕ್ರಿ.ಶ. 2000ರ ವರೆಗೆ 2003, ಪು.155–156.

[8] ಗೋಪಾಲ್, ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', 2008, ಪು.127.

[9] ಷೇಕ್ ಆಲಿ, ಬಿ., 'ಕರ್ನಾಟಕ ಚರಿತ್ರೆ', ಸಂ.5, 1197, ಪು.449.

# ಪರಾಮರ್ಶನ ಗ್ರಂಥಗಳು

**ಕನ್ನಡ ಕೃತಿಗಳು :**


ಅಂಗಡಿ ಎಸ್.ಎಸ್. 'ಸಂಕೀರ್ಣ ವೃತ್ತಿಪದಕೋಶ', ಕರ್ನಾಟಕ ವೃತ್ತಿಪರ ಮಂಜರಿ–5, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, 2000.

ಅನೀಸ್ ಸಿರಾಜ್ ಎಸ್. (ಮು.ಸಂ.), 'ಮೈಸೂರು ತಾಲ್ಲೂಕು ಗ್ಯಾಸೆಟಿಯರ್', ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, 2010.

ಈಶ್ವರಪ್ಪ ಎಂ.ಜಿ.(ಸಂ.), 'ಶತಮಾನ ದಾವಣಗೆರೆ', ಚಂಪಾಲ್ ಬಿ., ಡೆಲ್ವಿರಿಯಾ ಶ್ರೀ ಭಗವಾನ್ ಆದಿನಾಥ ಪ್ರತಿಷ್ಠಾನ, ದಾವಣಗೆರೆ, 2000.

ಖಂಡೋಬರಾವ್ ಎಚ್., 'ನಾಣ್ಯ ಕರ್ನಾಟಕ, ವಸ್ತುವಿನಿಯಮದಿಂದ ಕ್ರಿ.ಶ.2000ದವರೆಗೆ', ಮಗರ್ ಪಬ್ಲಿಕೇಷನ್ಸ್, 'ಸಹನಾ', ಶಿವಮೊಗ್ಗ, 2002.

ಗಂಗಾನಾಯಕ ಕೆ.ಎನ್. (ಪ್ರ.ಸಂ.), 'ಕರ್ನಾಟಕ ಇತಿಹಾಸ' ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2011.

ಗೋಪಾಲ್ ಆರ್. (ಸಂ.), 'ಉಡುಪಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ', ಮೈಸೂರು, 2001.

ಗೋಪಾಲ್ ಆರ್. (ಸಂ.), 'ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, 2004.

ಗೋಪಾಲ್ ಆರ್. (ಸಂ.), 'ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, 2005.

ಗೋಪಾಲ್ ಆರ್. (ಸಂ.), 'ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಪ್ರಾಚ್ಯ ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2008.

ಗೋಪಾಲ್ ಆರ್. (ಸಂ.), 'ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, 2004.

ಗೋಪಾಲ್ ಆರ್. (ಸಂ.), 'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2008.

ಗೋಪಾಲ್ ಆರ್. (ಸಂ.):, 'ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ', ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, 2007.

ಚಂದ್ರಮೌಳಿ ಕೆ., 'ಬೆಂಗಳೂರಿನ ನೋಟಗಳು', ಪ್ರಿಸಮ್ ಬುಕ್ಸ್ ಪ್ರೈ.ಲಿ., ಬನಶಂಕರಿ, ಬೆಂಗಳೂರು, 2002.

ರಾಜಪ್ಪ, ಡಿ.ಸಿ., 'ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು 1800–1881', ಅಕ್ಷರ ಪ್ರಕಾಶನ, ಸಾಗರ, 1995.

ನರಸಿಂಹಮೂರ್ತಿ ಎ.ವಿ., 'ಭಾರತೀಯ ನಾಣ್ಯಪರಂಪರೆ: ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ', ಪ್ರಸಾರಾಂಗ ಮತ್ತು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು, 2008.

ನರಸಿಂಹಮೂರ್ತಿ ಎ.ವಿ., 'ಕರ್ನಾಟಕ ನಾಣ್ಯ ಪರಂಪರೆ', ಅಡಿಮಿನಿಸ್ಟ್ರೇಟಿವ್ ಆಫೀಸರ್, ಕರ್ನಾಟಕ ಬುಕ್ ಅಥಾರಿಟಿ, ಚಾಮರಾಜಪೇಟೆ, ಬೆಂಗಳೂರು, 2003.

ನಾಗರಾಜ್ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ., 'ಇತಿಹಾಸ ದರ್ಶನ', ಸಂ.22, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, 1997.

ನಾಗರಾಜ್ ಎಂ.ಜಿ. ಹಾಗೂ ಕೃಷ್ಣಮೂರ್ತಿ ಪಿ.ವಿ., 'ಇತಿಹಾಸ ದರ್ಶನ ಸಂ.22', ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, 2007.

ನೀಲಾ ಮಂಜುನಾಥ (ಮು.ಸಂ.), 'ಕರ್ನಾಟಕ ಕೈಪಿಡಿ', ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು 2012.

ವರದರಾಜ ಹುಯಿಲಗೋಳ (ಅನು), 'ಭಾರತದ ಗ್ಯಾಸೆಟಿಯರ್ ಸಂ.11', ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, 1987.

ವೆಂಕಟರಂಗೋ ಕಟ್ಟೀ, 'ಗ್ಯಾಝೆಟೀಯರು ಧಾರವಾಡ, ಬೆಳಗಾವಿ, ವಿಜಾಪುರ ಕಾನಾಡಾ ಈ ನಾಲ್ಕು ಜಿಲ್ಲೆಗಳದ್ದು', ಏಷಿಯನ್ ಎಜುಕೇಶನಲ್ ಸರ್ವೀಸಸ್, ಹೊಸ ದೆಹಲಿ, 1984.

ಶೇಷಗಿರಿರಾವ್ ಎಲ್.ಎಸ್. (ಮು.ಸಂ.), 'ಬೆಂಗಳೂರು ದರ್ಶನ ಸಂ.1, 2 ಮತ್ತು 3', ಉದಯಭಾನು ಕಲಾ ಸಂಘ, ಕೆಂಪೇಗೌಡ ನಗರ, ಬೆಂಗಳೂರು, 2005.

ಷೇಕ್ ಆಲಿ.ಬಿ., 'ಕರ್ನಾಟಕ ಚರಿತ್ರೆ', ಸಂ.ವಿ., ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, 1997.

ಷೇಕ್ ಅಲಿ.ಬಿ., 'ಟಿಪ್ಪು ಸುಲ್ತಾನ್', ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯ, ಹೊಸ ದೆಹಲಿ, 1917.

ಸುಂದರರಾವ್ ಬ.ನ., 'ಬೆಂಗಳೂರಿನ ಇತಿಹಾಸ', ವಸಂತ ಸಾಹಿತ್ಯ ಗ್ರಂಥಮಾಲಾ ಬೆಂಗಳೂರು, 1985.

ಸೂರ್ಯನಾಥ ಯು. ಕಾಮತ್ (ಸಂ.), 'ಕರ್ನಾಟಕ ಗ್ಯಾಸೆಟಿಯರ್', ಧಾರವಾಡ ಜಿಲ್ಲೆ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, 1995.

ಸೂರ್ಯನಾಥ ಯು. ಕಾಮತ್, ದೇವರಕೊಂಡಾ ರೆಡ್ಡಿ ಮತ್ತು ಜಗನ್ನಾಥ ಎಸ್.ವಿ., 'ಇತಿಹಾಸ ದರ್ಶನ' ಸಂ.6, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, 1991.

ಸಾಂಬಮೂರ್ತಿ, 'ನೇಕಾರ ವೃತ್ತಿಪದಕೋಶ', ಕರ್ನಾಟಕ ವೃತ್ತಿ ಪದಮಂಜರಿ–3, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, 2000.

**ಆಂಗ್ಲ ಕೃತಿಗಳು :**

Ali, 'British Relations with Haidar Ali', Geetha Book House, Mysore, 1963.

Ali, 'Tippu Sulthan: A Great Mysore', Prasaaranga, Bangalore University, Bangalore, 1993.

Balakrishna R., 'Industrial Development of Mysore', Bangalore Press, Bangalore, 1940.

Francis, Buchanan, 'Journey from Madras through the Countries of Mysore, Canara and Malabar', Vol.I, II and III, London, 1807.

Gopal R., 'Tippu Sulthan: The Tiger of Mysore', Directorate of Archaeology and Museums, Exhibition Complex, Mysore, 2010.

Hawkes, H.P., 'Coins of Mysore', Printed at the Wesleyan Mission Press, 1856.

Hayavadana Rao C., 'Mysore Gazetteer', Vol.III, Bangalore, 1929.

Henderson, J.R. 'The Coins Haider Ali and Tippu Sultan', R.K. Publishers, Delhi, 1987.

Nanjundaiah H.V. and Anantha Krishna Iyer, 'The Mysore Tribes and Castes', Government of Mysore, 1901.

Rice Lewis B., 'Mysore Gazetteer', Vol.1, Revised Edition, Minister, London, 1907.

Shama Rao, 'Modern Mysore, Hi in Bothams', South Parade, Bangalore, 1936.

Suryanath U. Kamath, 'Karnataka State Gazetteer', Bangalore Rural District, Government of Karnataka publication, Bangalore, 1989.

Suryanath U. Kamath, 'Karnataka State Gazetteer', Bangalore Urban District, Government of Karnataka Publication, Bangalore, 1990.

Taylar, P., 'The Coins of Tipu Sulthan', Asian Educational Services, New Delhi, Madras, 1989.



ಚಿತ್ರ–5: ಫಿಲೇಚರ್ ಯಂತ್ರದಿಂದ ನೂಲನ್ನು ಶುಚಿಗೊಳಿಸುತ್ತಿರುವುದು



ಚಿತ್ರ–6: ರೇಷ್ಮೆ ಬಟ್ಟೆ ತಯಾರಿಸುವ ವಿದ್ಯುತ್ ಚಾಲಿತ ಯಂತ್ರ



ಚಿತ್ರ–6: ಬಂದೂಕಿನ ಚಿತ್ರ



ಚಿತ್ರ–9: ಮೈಸೂರು–ಬೆಂಗಳೂರು ರೈಲ್ವೆ ಹಳಿಯ ಪಕ್ಕವಿರುವ ಟಿಪ್ಪುವಿನ ಕಾಲದ ಯುದ್ಧದ ಮದ್ದನ್ನು ಸಂಗ್ರಹಿಸುತ್ತಿದ್ದ ಮನೆ



ಚಿತ್ರ–10: ಹೈದರಲಿ ಮತ್ತು ಟಿಪ್ಪು ಕಾಲದ ರಾಕೆಟ್‌ಗಳು



ಚಿತ್ರ–11: ಬೆಲ್ಲದ ಆಲೆಮನೆ



ಚಿತ್ರ–12: ಕಬ್ಬನ್ನು ಅರೆಯುವ ಮರದ ಗಾಣದ ತುಣುಕುಗಳು



ಚಿತ್ರ–13: ಕಬ್ಬನ್ನು ಅರೆಯುವ ವಿದ್ಯುತ್ ಚಾಲಿತ ಕಬ್ಬಿಣದ ಗಾಣ



ಚಿತ್ರ–14: ಶ್ರೀರಂಗಪಟ್ಟಣದ ಗುಂಬಜ್‌ನ ಸುತ್ತಲಿನ ಗ್ರಾನೈಟ್ ಕಲ್ಲಿನ ಕಂಬಗಳು



ಚಿತ್ರ–15: ಟಿಪ್ಪು ಸಂಬಂಧಿಕರ ಶವದ ಗೋರಿ ಇರುವ ಸ್ಥಳ ಗುಂಬಜ್



ಚಿತ್ರ–16: ಎಣ್ಣೆ ಹರೆಯುವ ಗಾಲಿಯ ಕಲ್ಲು



ಚಿತ್ರ–17: ಹಿತ್ತಾಳೆ ಲೋಹದ ಜಾಂಬುಗಳು



ಚಿತ್ರ–20: ಕುಂಬಾರಿಕಾ ವೃತ್ತಿ



ಚಿತ್ರ–21: ಕುಂಬಾರರಿಂದ ತಯಾರಿಸಿದ ಮಣ್ಣಿನ ಮಡಿಕೆಗಳು



ಚಿತ್ರ–22: ಹೈದರಾಲಿ ಮತ್ತು ಟಿಪ್ಪು ಕಾಲದ ಎತ್ತಿನ ಗಾಡಿ



ಚಿತ್ರ–23: ಬಿದಿರುಬುಟ್ಟಿಗಳ ತಯಾರಿಕೆ



ಚಿತ್ರ–24: ಬಿದಿರಿನ ಪುಟ್ಟಣಿಗೆ



ಚಿತ್ರ–25: ಶಬ್ಧ ನುಡಿಸುವ ಚರ್ಮದ ವಾದ್ಯಗಳು



ಚಿತ್ರ–26: ಚರ್ಮದ ಬಚ್ಚಣಿಗೆ



ಚಿತ್ರ–27: ಶ್ರೀರಂಗಪಟ್ಟಣದಲ್ಲಿರುವ ದರಿಯಾ ದೌಲತ್ ಅರಮನೆ ಗೋಡೆಯ ಬಣ್ಣದ ಚಿತ್ರಗಳು



ಚಿತ್ರ–28: ಲೇತ್ ಮಶಿನ್‌ನಿಂದ ಮರದ ಆಟಿಕೆ ಸಾಮಾನು ತಯಾರಿಕೆ

